ಲಾಭದಲ್ಲಿ ತನ್ನ ಉಪಜೀವನಕ್ಕೆ ಬೇಕಾಗುವಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಸಾರ್ವಜನಿಕ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕು.

೨ ವರ್ಣವೆಂದರೆ ಅಧಿಕಾರವಲ್ಲ, ಒಂದು ಧರ್ಮ. ಪ್ರತಿಯೊಂದು ವರ್ಣವೂ ತನ್ನ ತನ್ನ ಕರ್ಮವನ್ನು ಧರ್ಮವೆಂದು ತಿಳಿದು ಮಾಡತಕ್ಕದ್ದು, ಇಷ್ಟೇ ಅದರ ತಾತ್ಪರ್ಯ. ಉದರ-ಪೋಷಣೆ ಎಂಬುದು ಇದರಿಂದ ಆಗುವ ಅಲ್ಪ ಫಲ ಮಾತ್ರ. ಇದು ದೊರೆಯಲಿ ದೊರೆಯದಿರಲಿ; ಇದನ್ನರಿತವರು ತಮ್ಮ ಧರ್ಮದಲ್ಲಿ ತೊಡಗಿರ ತಕ್ಕದ್ದು.

೩ ಈ ವರ್ಣಗಳಲ್ಲಿ ಒಂದು ನೀಚ, ಇನ್ನೊಂದು ಉಚ್ಚವೆಂಬ ಭೇದವಿಲ್ಲ. ಎಲ್ಲ ವರ್ಣಗಳೂ ಸರಿಸಮಾನ ಎಂಬುದೇ ಇದರ ಅರ್ಥ.

೪ ಸಾಮಾನ್ಯವಾಗಿ ಜನ್ಮದಿಂದಲೇ ವರ್ಣವನ್ನು ನಿಶ್ಚಯಿಸಬೇಕು. ಕೆಲವು ಕಡೆಗಳಲ್ಲಿ ಕರ್ಮದಂತೆ ವರ್ಣವನ್ನು ನಿಶ್ಚಯಿಸಬಹುದು. ಸಾಮಾನ್ಯವಾಗಿ ನೋಡಿದರೆ ತಂದೆ-ತಾಯಂದಿರು ಮಾಡುತ್ತ ಬಂದಿರುವ ಉದ್ಯೋಗವನ್ನು ಮಾಡುವ ಕಲೆಯೇ ಮನುಷ್ಯನ ಸ್ವಭಾವಕ್ಕೆ ಸಹಜವಾದುದು. ಈ ನಿಯಮವು ಸರ್ವವ್ಯಾಪಕವಾಗಿರುವುದು. ತಿಳಿದು ಅಥವಾ ತಿಳಿಯದೆ ಎಲ್ಲರೂ ತಕ್ಕಮಟ್ಟಿಗೆ ಇದನ್ನು ಪಾಲಿಸುವರು. ಹಿಂದೂ ಜನರ ಪೂರ್ವಜರು ಅತ್ಯಂತ ಕಠಿಣ ತಪಶ್ಚರ್ಯ ಮಾಡಿ ಈ ಮಹಾ ಧರ್ಮವನ್ನು ಕಂಡುಹಿಡಿದರು; ಕೈಲಾದ ಮಟ್ಟಿಗೆ ಅದನ್ನು ಆಚರಿಸಿದರು. ಜಗತ್ತು ಈ ಧರ್ಮವನ್ನು ಅನುಸರಿಸಿದರೆ ಎಲ್ಲ ಕಡೆಗಳಲ್ಲಿ ಶಾಂತಿಯು ನೆಲೆಗೊಳ್ಳುವುದು. ಹೊಟ್ಟೆಕಿಚ್ಚಿನಿಂದ ನಡೆಯುವ ಮೇಲಾಟಗಳು ನಿಲ್ಲುವವು. ಅಸೂಯೆಯು ಇಲ್ಲದಂತಾಗುವುದು. ಯಾರೂ ಅನ್ನಾನ್ನಗತಿಕರಾಗಿ ಸಾಯರು. ಜನನ-ಮರಣದ ಸಂಖ್ಯೆಯು ಸಮವಾಗು ವುದು. ಅನೇಕ ದುಃಖಗಳು ದೂರಾಗುವವು.

೫ ಈ ಧರ್ಮವ್ಯವಸ್ಥೆಯಲ್ಲಿ ಬ್ರಾಹ್ಮಣನು ಬ್ರಹ್ಮನನ್ನು ಅರಿತುಕೊಳ್ಳುವುದ ರಲ್ಲೂ, ಜನರಿಗೆ ಬ್ರಹ್ಮನನ್ನು ಅರಿಯುವ ಮಾರ್ಗವನ್ನು ಉಪದೇಶಿಸುವುದರಲ್ಲೂ ಕಾಲ ಕಳೆಯುವನು. ತನ್ನ ಉಪಜೀವನವನ್ನು ಪರಮಾತ್ಮನೇ ಸಾಗಿಸುವ ನೆಂದು ತಿಳಿಯುವನು. ಕ್ಷತ್ರಿಯನು ಪ್ರಜಾ-ಪಾಲನೆಯೇ ತನ್ನ ಧರ್ಮವೆಂದು ತಿಳಿದು, ಅದಕ್ಕೆ ಪ್ರತಿಫಲವಾಗಿ ತನ್ನ ಉಪಜೀವನಕ್ಕೆ ಬೇಕಾಗುವಷ್ಟು ಮಾತ್ರ ದ್ರವ್ಯವನ್ನು ತೆಗೆದುಕೊಳ್ಳುವನು. ವೈಶ್ಯನು ಪ್ರಜರ ಕಲ್ಯಾಣಕ್ಕಾಗಿ ಒಕ್ಕಲು ತನ, ಗೋಪಾಲನೆ ಮತ್ತು ವ್ಯಾಪಾರವನ್ನು ಮಾಡುವನು. ಇದರಿಂದ ಪ್ರಾಪ್ತ

ವಾದ ಧನದಲ್ಲಿ ತನ್ನ ಜೀವನನಿರ್ವಾಹಕ್ಕೆ ಬೇಕಾಗುವಷ್ಟನ್ನು ಮಾತ್ರ ತೆಗೆದು ಕೊಂಡು ಉಳಿದುದನ್ನೆಲ್ಲ ಜನಹಿತಕ್ಕಾಗಿ ವಿನಿಯೋಗಿಸುವನು. ಇದೇ ರೀತಿ ಶೂದ್ರನೂ ಸೇವೆಯು ತನ್ನ ಧರ್ಮವೆಂದು ತಿಳಿದು ಅದನ್ನು ಮಾಡುವನು.

೬ ಈ ವ್ಯವಸ್ಥೆಯ ಮೇರೆಗೆ ಆ ಆ ಮನುಷ್ಯನು ತನ್ನಲ್ಲಿದ್ದ ಯಾವುದೇ ಸೊತ್ತಿನ ಒಡೆಯನಾಗದೆ ಸಮಾಜದ ಸಲುವಾಗಿ ಅದರ ಧರ್ಮಧರ್ಶಿ (trustee) ಯಾಗುವನು. ತಾನು ಅದರ ಒಡೆಯನೆಂದು ಅವನು ತಿಳಿದುಕೊಳ್ಳಲಾಗದು. ರಾಜನು ತನ್ನ ಅರಮನೆಯ, ಹಾಗೂ ಪ್ರಜರಿಂದ ತೆಗೆದುಕೊಂಡ ಕರದ ಯಜಮಾನನಲ್ಲ- ಅವುಗಳ ಧರ್ಮಧರ್ಶಿ ಮಾತ್ರ. ತನ್ನ ಹೊಟ್ಟೆಬಟ್ಟೆಗೆ ಬೇಕಾಗುವಷ್ಟನ್ನು ತೆಗೆದುಕೊಂಡು ಉಳಿದುದೆಲ್ಲವನ್ನೂ ಪ್ರಜರ ಕಲ್ಯಾಣಕ್ಕಾಗಿ ವಿನಿ-ಯೋಗಿಸಲು ಅವನು ಬದ್ಧನು. ಕಾರ್ಯದಕ್ಷತೆಯಿಂದ ತನ್ನ ಉತ್ಪನ್ನವನ್ನು ಬೆಳೆಯಿಸಿಕೊಂಡು ಪ್ರಜರಿಗೆ ಒಂದಿಲ್ಲೊಂದು ರೀತಿಯಿಂದ ಅದಷ್ಟು ಹೆಚ್ಚಿಗೆ ಲಾಭವನ್ನು ಅವನು ಹಿಂತಿರುಗಿ ಕೊಡುವನು. ವೈಶ್ಯನೂ ಹಾಗೆಯೇ.

೭ ಶೂದ್ರನನ್ನು ಕುರಿತು ಏನು ಹೇಳೋಣ? ಅವನಲ್ಲಿ ಯಾವ ಆಸ್ತಿಯೂ ಇರುವುದಿಲ್ಲ. ಆದ್ದರಿಂದ ಯಾವ ಶೂದ್ರನು ಸೇವೆಯನ್ನು ತನ್ನ ಧರ್ಮವೆಂದು ತಿಳಿದು ಮಾಡುವನೋ, ಮತ್ತು ಒಡೆಯನಾಗಲು ಹವಣಿಸನೋ, ಅವನು ಆದರ-ವಂದನೆಗಳಿಗೆ ಪಾತ್ರನು. ಎಲ್ಲರಿಗಿಂತಲೂ ಅವನೇ ಶ್ರೇಷ್ಠನು.

೮ ಮೂರೂ ವರ್ಣದವರು ತಾವು ಪ್ರಜರ ಸೇವಕರೆಂದು ತಿಳಿದುಕೊಂಡು ತಮ್ಮಲ್ಲಿದ್ದ ಆಸ್ತಿಯನ್ನು ಸಾರ್ವಜನಿಕ ಕಾರ್ಯಕ್ಕಾಗಿ ಉಪಯೋಗಿಸುತ್ತಿದ್ದರೆ ಮಾತ್ರ ಶೂದ್ರನ ಸೇವಾಧರ್ಮವನ್ನು ಹೊಗಳಿದರೆ ಶೋಭಿಸುವುದು. ಅವನ ಮೇಲೆ ಈ ಸೇವಾಧರ್ಮವನ್ನು ಬಲದಿಂದ ಹೊರಿಸಲಿಕ್ಕಾಗದು.

೯ ವರ್ಣಧರ್ಮದ ಶೋಧಕರು, ವರ್ಣವು ಧರ್ಮವೆಂದು ತಿಳಿದು ಅದನ್ನು ಆಚ-ರಿಸಬೇಕೆಂದೂ ಆ ಆಚರಣೆಯಲ್ಲಿ ಬಲಾತ್ಕಾರವು ಎಳ್ಳಷ್ಟೂ ಇರಕೂಡದೆಂದೂ ಹೇಳುತ್ತಾರೆ. ಇದನ್ನು ಪಾಲಿಸುವುದರಿಂದಲೇ ಜಗತ್ತು ಜೀವಿಸಿರುವುದು, ಹಾಗೂ ಅದರ ಉದ್ಧಾರವಾಗುವುದು. ಪ್ರತಿಯೊಬ್ಬನೂ ಹೀಗೆ ತಿಳಿದು ಕೊಂಡು ತನ್ನ ತನ್ನ ವರ್ಣಧರ್ಮವನ್ನು ಪಾಲಿಸುವುದರಲ್ಲೇ ಸಾಯಬೇಕು. ಆದರೆ ಇದನ್ನು ಪಾಲಿಸಲು ಬೇರೆಯವರನ್ನು ಒತ್ತಾಯ ಪಡಿಸಬಾರದು.

೧೦ ಬಲ್ಲವರಿಗೆ ಈ ಧರ್ಮದ ಪಾಲನೆ ಬಹು ಸುಲಭ.

೧೧ ಈ ರೀತಿಯ ವರ್ಣಧರ್ಮವು ಸಮತೆಯ ಧರ್ಮವು. ಇದು ಬರಿಯ

ಸಾಮ್ಯ'ವಾದ'ವಲ್ಲ. ಈ ಧರ್ಮದಿಂದ ಜಗತ್ತಿನಲ್ಲಿರುವ ವೈಷಮ್ಯಗಳ ಬದಲು ಸರಿ-ಸಮಾನತೆಯ ಸಾಮ್ರಾಜ್ಯವುಂಟಾಗುವುದು. ಎಲ್ಲ ಕಸುಬುಗಳೂ ಉಚ್ಚವೆಂದೆನಿಸುವವು. ಎಲ್ಲವುಗಳ ಬೆಲೆಯೂ ಒಂದೇ ಆಗುವುದು. ಅರಸರು ಮಂತ್ರಿಗಳು ಮೊದಲುಗೊಂಡು ಭಂಗಿಯ ವರೆಗಿನವರೆಲ್ಲರೂ ಸರಿಸಮಾನರೆಂದು ಎಣಿಸಲ್ಪಡತಕ್ಕದ್ದು. ಅವರೆಲ್ಲರ ಗಳಿಕೆ, ಉತ್ಪನ್ನ, ಸರಿಸಮಾನವಿರತಕ್ಕದ್ದು. ಮೇಲಿನ ಮೂರು ವರ್ಣಗಳು ಹೆಚ್ಚು ಗಳಿಸುವುದು-ಶೂದ್ರನು ಕಡಮೆ ಗಳಿಸುವುದು, ಅಥವಾ ಕ್ಷತ್ರಿಯನು ಅರಮನೆಯಲ್ಲಿ ವಾಸಿಸುವುದು-ಬ್ರಾಹ್ಮಣನು ಭಿಕ್ಷುಕವೃತ್ತಿಯಿಂದ ಗುಡಿಸಲಿನಲ್ಲಿರುವುದು, ವೈಶ್ಯನು ದೊಡ್ಡ ದೊಡ್ಡ ಹೊಲ ಮನೆ ಮಾಡಿಕೊಂಡು ಇರುವುದು ವಖಾರಗಳನ್ನು ಕಟ್ಟಿಸಿಕೊಂಡಿರುವುದು- ಮತ್ತು ಶೂದ್ರನು ಮನೆ-ಮಾರು ಇಲ್ಲದೆ ಆಳಾಗಿರುವುದು, ಇಂತಹ ಕರುಣಾಜನಕ ಸ್ಥಿತಿಯು ವರ್ಣಧರ್ಮದ ಪಾಲನೆಯಾಗುತ್ತಿರುವ ಕಡೆಯಲ್ಲಿ ಇರಲಾರದು, ಇರಬಾರದು.

೧೨ ಈ ತರದ ವರ್ಣಧರ್ಮವು ಇಂದು ಇಲ್ಲದಂತಾಗಿದೆ. ಎಷ್ಟೋ ಜನರು ತಾವು ಬ್ರಾಹ್ಮಣರು, ಕ್ಷತ್ರಿಯರು, ಇಲ್ಲವೆ ವೈಶ್ಯರೆಂದುಕೊಳ್ಳುತ್ತಾರೆ. ಶೂದ್ರರೆನ್ನಿಸಿಕೊಳ್ಳಲು ಎಲ್ಲರೂ ನಾಚುತ್ತಾರೆ. ಇದರಿಂದ ವರ್ಣಗಳು ಹೆಸರಿಗೆ ಮಾತ್ರ ಉಳಿದಿವೆಯೆನ್ನಬಹುದು. ಆದರೂ ವ್ಯವಹಾರದಲ್ಲಿ ನಾವು 'ವರ್ಣ'ವನ್ನಿಡಬೇಕೆಂದರೆ, ನಾವೆಲ್ಲರೂ ಶೂದ್ರರೆನಿಸುವೆವು. ನಿಜವಾಗಿ ಶೂದ್ರರೂ ಅಲ್ಲವೆಂದು ಹೇಳಬೇಕಾಗಿದೆ. ಏಕೆಂದರೆ ಶೂದ್ರವರ್ಣವೂ ಧರ್ಮವೇ. ಅದನ್ನು ಸ್ವೇಚ್ಛೆಯಿಂದ ಸ್ವೀಕರಿಸಬೇಕಾಗುವುದು. ಅಲ್ಲಿ ನಾಚಿಕೆಗೆ ಎಡೆಯಿಲ್ಲ. ಈ ರೀತಿಯಾಗಿ ಇಲ್ಲದೆ ಇದ್ದ ಮೇಲೆ ನಾವೂ ಕಾಲಮಾನಕ್ಕೆ ವಶರಾಗಿದ್ದೇವೆ, ಅರ್ಥಾತ್ ಗುಲಾಮರಾಗಿದ್ದೇವೆ ಎಂದ ಹಾಗಾಯಿತು.

೧೩ ಯಾವನು ಯಾವ ವರ್ಣದ ಕಾರ್ಯಮಾಡುವನೋ ಅವನು ಆ ವರ್ಣದವನೆಂದು ಎಣಿಸಬೇಕು. ಆ ಆ ವರ್ಣದವರು ಮಾಡತಕ್ಕ ಆ ಆ ಕಾರ್ಯಗಳು ನಡೆದೇ ಇರುವವು. ಆದ್ದರಿಂದ ವರ್ಣಧರ್ಮವು ಲೋಪವಾಗಿಲ್ಲ ಎಂದು ಹೇಳುವುದು ಸರಿಯೆನಿಸುವುದಿಲ್ಲ. ಯಾಕೆಂದರೆ ಕರ್ಮಗಳೆಲ್ಲ ಮಿಶ್ರವಾದಾಗ, ಎಲ್ಲ ಜನರು ತಮ್ಮ ಮನಸ್ಸಿಗೆ ಬಂದ ಕರ್ಮಗಳನ್ನು ಮಾಡುತ್ತಿರುವಾಗ, ಅಲ್ಲಿರುವುದು ವರ್ಣಧರ್ಮದ ಪಾಲನೆಯಲ್ಲ, ವರ್ಣದ ಸಂಕರ ಎನ್ನಬಹುದು.

೧೪ ವರ್ಣದಲ್ಲಿ ಉಚ್ಚನೀಚ ಭಾವನೆಗೆ ಎಡೆಯಿಲ್ಲ. ಆದರೆ ಬಹು ದಿನ

ಗಳಿಂದ ಹಿಂದೂ ಧರ್ಮದಲ್ಲಿ ಧರ್ಮದ ಹೆಸರಿನಲ್ಲಿ ಉಚ್ಚನೀಚವೆಂಬ ಭಾವನೆ ಬೇರೂರಿದೆ. ಇದು ಹಿಂದೂ ಧರ್ಮದ ಕು-ರೂಪ, ವಿಕಟರೂಪ. ಇಂದು ಪ್ರಪಂಚ ದಲ್ಲಿ ನಡೆದಿರುವ ಕಲಹಗಳಿಗೆಲ್ಲ ಈ ಉಚ್ಚನೀಚವೆಂಬ ಭಾವನೆಯೇ ಮುಖ್ಯ ಕಾರಣ. ಈ ಕಲಹಗಳು ಇಲ್ಲದಂತಾಗಬೇಕಾದರೆ ವರ್ಣಧರ್ಮದ ಪಾಲನೆ ಯಾಗಬೇಕು.

೧೫ ಶೂದ್ರರು ನೀಚರು ತಾವು ಉಚ್ಚರು ಎಂದು ಮೂರು ವರ್ಣದವರು ತಿಳಿದುಕೊಂಡರೆ, ಶೂದ್ರರು ಅವರನ್ನು ದ್ವೇಷಿಸುವರು; ಉಚ್ಚ ವರ್ಗದವರೆನ್ನಿಸಿ ಕೊಂಡವರು ಸಂಗ್ರಹಿಸಿದ ಸೊತ್ತನ್ನು ಪಡೆದುಕೊಳ್ಳಲು ಬಯಸುವರು. ಇದು ಸ್ವಾಭಾವಿಕವಾದುದು. ಇದರಲ್ಲಿ ಹೊಸದೇನೂ ಇಲ್ಲ. ಇದಕ್ಕಾಗಿ ನಾವು ದುಃಖಪಡಬೇಕಾದುದೂ ಇಲ್ಲ.

೧೬ ವರ್ಣಧರ್ಮವು ಇಂದು ಊಟ-ಉಡಿಗೆಯಲ್ಲಿ, ಮತ್ತು ವಿವಾಹದಲ್ಲಿ ಮಾತ್ರ ಉಳಿದುಕೊಂಡಿದೆ. ವ್ಯವಹಾರದಲ್ಲಿ ಖಾದ್ಯಾಖಾದ್ಯ ವಿವೇಕಕ್ಕೂ ವಿವಾಹದ ನಿಯಮಕ್ಕೂ ಸ್ಥಾನವುಂಟು. ಆದರೆ ವರ್ಣಧರ್ಮವು ನಿಂತದ್ದು ಇವೆರಡರ ಮೇಲೆಯೆ ಅಲ್ಲ. ಇವೆರಡನ್ನು ವರ್ಣಧರ್ಮದೊಡನೆ ಜೋಡಿಸಿಬಿಟ್ಟದ್ದ ರಿಂದ ಇಂದು ಹಿಂದೂ ಧರ್ಮಕ್ಕೆ ಹಾನಿ ತಟ್ಟಿದೆ.

೧೭ ವರ್ಣದ ಹಾಗೂ ಜಾತಿಯ ನಡುವೆ ಇಂದು ಭೂಮ್ಯಾಕಾಶದಷ್ಟು ಅಂತರವಿದೆ. ಈಗ ಕಾಣಬರುವ ಜಾತಿ ಉಪಜಾತಿಗಳು ವರ್ಣವ್ಯವಸ್ಥೆಯ ಹಾಳಾದ ಕುರುಹುಗಳು. ಇವುಗಳ ತಳಹದಿಯಲ್ಲಿ ವರ್ಣಭೇದದಂತಹ ವ್ಯಾಪಕ ನಿಯಮಗಳಿಲ್ಲ. ಇವು ಹುಟ್ಟಿದ್ದು ಆಕಸ್ಮಿಕ ಕಾರಣಗಳಿಂದ, ರೂಢಿಗಳಿಂದ. ಇವು ಜಾತಿ-ಬಂಧನಗಳೇ ಹೊರತು ವರ್ಣವ್ಯವಸ್ಥೆಯಲ್ಲ. ಇವುಗಳಿಂದ ಹಿಂದೂ ಧರ್ಮಕ್ಕೆ ಕೇಡುಂಟು. ಆದ್ದರಿಂದ ಇವನ್ನು ನಾಶಪಡಿಸತಕ್ಕದ್ದು.

೧೮ ವರ್ಣಗಳು ನಾಲ್ಕು ಎಂದು ಶಾಸ್ತ್ರಗಳಲ್ಲಿ ಹೇಳಿದೆ. ನಾಲ್ಕೇ ಇರ ಬೇಕು ಎನ್ನುವುದು ಆಗತ್ಯವಾದ ನಿರ್ಬಂಧವಲ್ಲ. ವರ್ಣಧರ್ಮದ ಪುನರುದ್ಧಾರದ ಕಾಲಕ್ಕೆ ನಾಲ್ಕಕ್ಕಿಂತ ಹೆಚ್ಚು ಬೇಕೆನ್ನಿಸಲೂ ಬಹುದು, ನಾಲ್ಕಕ್ಕಿಂತ ಕಡಮೆ ಮಾಡುವುದೂ ಅವಶ್ಯವೆನ್ನಿಸಬಹುದು.

## ೩ ಆಶ್ರಮ

೧ ಸೃಷ್ಟಿಯ ನಿಯಮಗಳನ್ನು ವ್ಯವಸ್ಥಿತವಾಗಿ ಆಚರಣೆಯಲ್ಲಿ ತರು ವುದಕ್ಕಾಗಿ ಮಾಡಿದ ಪ್ರಯತ್ನವೇ ಆಶ್ರಮ ವ್ಯವಸ್ಥೆ.

೨ ಎಲ್ಲ ವರ್ಣಗಳ ಜನರಿಗೆ ಎಲ್ಲ ಆಶ್ರಮಗಳ ಅಧಿಕಾರವುಂಟು.

೩ ನಾಲ್ಕೂ ಆಶ್ರಮಗಳು ಸರಪಳಿಯ ಕೊಂಡಿಗಳಂತೆ ಒಂದಕ್ಕೊಂದು ಸಂಬಂಧಪಟ್ಟಿವೆ. ಒಂದನ್ನು ಬಿಟ್ಟು ಇನ್ನೊಂದನ್ನು ಪಾಲಿಸಲಿಕ್ಕಾಗುವುದಿಲ್ಲ.

೪ ಹುಟ್ಟಿದಾರಭ್ಯ ಮನುಷ್ಯನು ಬ್ರಹ್ಮಚರ್ಯಾಶ್ರಮದಲ್ಲಿರುವನು. ಆದ್ದರಿಂದ ಈ ಆಶ್ರಮದ ನಿಯಮಗಳಿಗನುಸರಿಸಿ ವರ್ತಿಸುವುದು ಕರ್ತವ್ಯವೆನಿಸುವುದು. ಈ ಆಶ್ರಮವನ್ನು ಎಂದಿಗೂ ಬಿಡದಿರುವ, ಯಾವಜ್ಜೀವನವೂ ಬ್ರಹ್ಮಚರ್ಯವನ್ನು ಪಾಲಿಸುವ ಅಧಿಕಾರವು ಸರ್ವರಿಗೂ ಉಂಟು. ಪುರುಷರು ಕನಿಷ್ಠ ೨೫ ವರ್ಷಗಳ ವರೆಗೂ ಸ್ತ್ರೀಯರು ೧೮ ವರ್ಷಗಳ ವರೆಗೂ ಪವಿತ್ರರಾಗಿದ್ದುಕೊಂಡು ಈ ಬ್ರಹ್ಮಚರ್ಯಾಶ್ರಮವನ್ನು ಪಾಲಿಸಬೇಕು.

೫ ಈ ಆಶ್ರಮದಲ್ಲಿ ಆಚರಿಸಿದ ಪವಿತ್ರವಾದ ಹಾಗೂ ಸಂಯಮೀ ಜೀವನಕ್ರಮದ ಅಡಿಗಲ್ಲಿನ ಮೇಲೆಯೇ ಉಳಿದ ಆಶ್ರಮಗಳ ಉಜ್ವಲತೆಯು ಅವಲಂಬಿಸಿದೆ. ಆದುದರಿಂದ ಆಧ್ಯಾತ್ಮಿಕ ದೃಷ್ಟಿಯಿಂದಲೂ ಮೊದಲಿನ ಆಶ್ರಮವೇ ಮುಖ್ಯವಾದ ಆಶ್ರಮ. ಇದು ಲೋಪವಾಗಿರುವುದರಿಂದ ಹಿಂದೂ ಧರ್ಮಕ್ಕೂ ಹಿಂದೂ ಸಮಾಜಕ್ಕೂ ಬಹಳ ಹಾನಿ ತಗಲಿದೆ. ಈ ಆಶ್ರಮವನ್ನು ಹೆಚ್ಚು ಉಜ್ವಲಗೊಳಿಸುವುದು ಪ್ರತಿಯೊಬ್ಬ ಹಿಂದೂವಿನ ಕರ್ತವ್ಯ. ಈ ಹೊತ್ತು ಆ ಆಶ್ರಮವನ್ನು ಪಾಲಿಸುವವರು ತೀರ ವಿರಳ.

೬ ಗೃಹಸ್ಥಾಶ್ರಮದೊಳಗಿನ ವಿವಾಹ-ಧರ್ಮವನ್ನು ಕುರಿತು ಮುಂದಿನ ಪ್ರಕರಣಗಳಲ್ಲಿ ವಿಚಾರ ಮಾಡಲಾಗಿದೆ. ಧರ್ಮಮಾರ್ಗದಿಂದ ಪ್ರಜಾಸಂಪತ್ತನ್ನು ಬೆಳೆಸುವ ಭಾರವು ಈ ಆಶ್ರಮಕ್ಕೆ ಒಪ್ಪಿಸಲ್ಪಟ್ಟಿದೆ.

೭ ಗೃಹಸ್ಥಾಶ್ರಮವಿರುವುದು ಭೋಗಕ್ಕಾಗಿ ಎನ್ನುವುದು ತಪ್ಪು. ಹಿಂದೂ ಧರ್ಮದ ಎಲ್ಲ ವ್ಯವಸ್ಥೆಯು ಸಂಯಮವನ್ನು ಸಾಧಿಸುವುದಕ್ಕಾಗಿಯೇ ಇರುವುದು. ಆದ್ದರಿಂದ ಭೋಗವು ಎಂದಿಗೂ ಕರ್ತವ್ಯವೆನಿಸದು. ಸರಳತೆಯೂ ಸಂಯಮವೂ ಗೃಹಸ್ಥಾಶ್ರಮದ ದೂಷಣಗಳಲ್ಲ, ಭೂಷಣಗಳು.

ಆದರೆ ಎಷ್ಟೋ ಜನರು ಸಂಯಮವನ್ನೇ ಧ್ಯೇಯವನ್ನಾಗಿಟ್ಟುಕೊಂಡಿದ್ದರೂ ಭೋಗಗಳ ಕಡೆಗೆ ಹೋಗುವ ತಮ್ಮ ಮನಸ್ಸನ್ನು ಬಿಗಿಹಿಡಿಯಲಾರರು. ಗೃಹಸ್ಥಾಶ್ರಮದ ಧರ್ಮಗಳು ಈ ಭೋಗಗಳಿಗೆ ಎಲ್ಲೆಯನ್ನೂ, ಅವನ್ನು ಸೇವಿಸುವ ವಿಧಿಯನ್ನೂ ಹಾಕಿಕೊಡುವವು.

೮ ಇಂದು ಎಲ್ಲರೂ ಪಾಲಿಸುತ್ತಿರುವುದು ಗೃಹಸ್ಥ 'ವೃತ್ತಿ'-ಪ್ರಜಾ

ವೃದ್ಧಿಯು ಕಾರ್ಯವೇ–ಹೊರತು ಗೃಹಸ್ಥ 'ಧರ್ಮ'ವಲ್ಲ. ಇದರಿಂದ ಬಹಳವಾಗಿ ಸ್ವೇಚ್ಛಾಚಾರವೂ ವ್ಯಭಿಚಾರವೂ ಬೆಳೆಯುವವು.

೯ ವ್ಯಭಿಚಾರದಿಂದ, ಇಲ್ಲವೆ ಸ್ವೇಚ್ಛಾಚಾರದಿಂದ ಜೀವನವನ್ನು ಕಳೆದವರಿಗೆ ವಾನಪ್ರಸ್ಥವೂ ಸನ್ಯಾಸವೂ ಅತ್ಯಂತ ಕಠಿಣವಾಗುವವು ಎಂಬುದನ್ನು ನಾವು ಅರಿಯಬೇಕು.

೧೦ ಭೋಗಗಳನ್ನು ಕಡಮೆ ಮಾಡುತ್ತ ಹೋಗಿ, ಅವುಗಳ ಬಗ್ಗೆ ಇದ್ದ ಮೋಹವನ್ನು ಬಿಡುವ ಶಕ್ತಿಯು ಪ್ರಾಪ್ತವಾದ ಕೂಡಲೆ ಗೃಹಸ್ಥ–ದಂಪತಿಗಳು ಬ್ರಹ್ಮಚರ್ಯಾಶ್ರಮದ ವ್ರತಗಳನ್ನು ಕೈಕೊಂಡು, ಅಥವಾ ಪುನಃ ಅವನ್ನು ತೇಜಃಪುಂಜ ಮಾಡಿ ವಾನಪ್ರಸ್ಥರಾಗುವರು. ಯಾವನು ತನ್ನ ರಾಗದ್ವೇಷಗಳನ್ನು ಪೂರ್ಣವಾಗಿ ಗೆಲ್ಲದಿದ್ದರೂ ಇಂದ್ರಿಯಗಳನ್ನು ತಡೆದು ನಿಲ್ಲಿಸುವ ಶಕ್ತಿಯನ್ನು ಸಂಪಾದಿಸಿರುವನೊ, ಮತ್ತು ಯಾವನು ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವನೊ ಅವನೇ ವಾನಪ್ರಸ್ಥನೆನ್ನಿಸುವನು. ಈಗ ಈ ಆಶ್ರಮದ ಲೋಪವೇ ಆಗಿದೆ ಎನ್ನಬಹುದು.

೧೧ ರಾಗದ್ವೇಷಗಳನ್ನು ಸಂಪೂರ್ಣವಾಗಿ ಗೆದ್ದವನು, ಕಾಯಾ–ವಾಚಾ–ಮನಸಾ ಸತ್ಯ, ಅಹಿಂಸೆ, ಬ್ರಹ್ಮಚರ್ಯ ಮುಂತಾದ ಯಮಗಳನ್ನು ಪಾಲಿಸುವವನು ಸಂನ್ಯಾಸಿ ಎನಿಸುವನು. ಇಂಥ ಸಂನ್ಯಾಸಿಯು ನಿಷ್ಕಾಮ ಭಾವನೆಯಿಂದ ಕರ್ಮಮಾಡುವನು, ತನ್ನ ನಿರ್ವಾಹಕ್ಕಾಗಿ ಭಿಕ್ಷೆಯನ್ನು ಅವಲಂಬಿಸುವನು.

೧೨ ಆಶ್ರಮಗಳಿಗೂ ಬಾಹ್ಯ ವೇಷಗಳಿಗೂ ಏನೂ ಸಂಬಂಧವಿಲ್ಲ.

## ೪ ಸ್ತ್ರೀಜಾತಿ

೧ ಸ್ತ್ರೀಜಾತಿಯ ವಿಷಯವಾಗಿದ್ದ ಕೀಳು ಭಾವನೆಯು ಹಿಂದೂ ಧರ್ಮದಲ್ಲಿ ಒಳಸೇರಿದ ಕೆಸರು, ಕೊಳಕು. ಅದು ಧರ್ಮದ ಅಂಗವಲ್ಲ. ಧಾರ್ಮಿಕ ಪುರುಷರು ಕೂಡ ಸ್ತ್ರೀಜಾತಿಯನ್ನು ತಿರಸ್ಕಾರದ ದೃಷ್ಟಿಯಿಂದ ನೋಡುವರು. ಇದರಿಂದ ಹಿಂದೂ ಧರ್ಮದಲ್ಲಿ ಈ ಕೊಳಕು ಎಷ್ಟು ಆಳವಾಗಿ ಒಳಸೇರಿದೆ ಎನ್ನುವುದು ವ್ಯಕ್ತವಾಗುವುದು.

೨ ಸ್ತ್ರೀ ಮತ್ತು ಪುರುಷನಲ್ಲಿ ಪ್ರಾಕೃತಿಕ ಭೇದಗಳುಂಟು. ಆದುದರಿಂದ ನಿತ್ಯ-ಜೀವನದಲ್ಲೂ ಅವರು ಆಚರಿಸತಕ್ಕಂಥ ಕರ್ತವ್ಯಗಳಲ್ಲೂ ಭೇದಗಳುಂಟು.

ಇಬ್ಬರಲ್ಲಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ. ಇಬ್ಬರೂ ಸಮಾಜದ ಸಮಾನ, ಮಹತ್ವದ, ಮತ್ತು ಪ್ರತಿಷ್ಠೆಗೆ ಪಾತ್ರವಾದ ಅಂಗಗಳು.

೩ ಪುರುಷನು ಒಂದು ಕಡೆಯಿಂದ ಸ್ತ್ರೀಜಾತಿಯನ್ನು ಮೆಟ್ಟುವನು, ಅಜ್ಞಾನದಲ್ಲಿಡುವನು, ತಿರಸ್ಕರಿಸುವನು, ನಿಂದಿಸುವನು. ಇನ್ನೊಂದು ಕಡೆಯಿಂದ, ಅದು ತನ್ನ ಭೋಗೇಚ್ಛೆಯನ್ನು ತೃಪ್ತಿಪಡಿಸುವ ಸಾಧನವೆಂದು ಎಣಿಸುವನು. ಆದ್ದರಿಂದ ಗೊಂಬೆಯನ್ನು ಸಿಂಗರಿಸಿದ ಹಾಗೆ ತನ್ನ ಮನಬಂದಂತೆ ಅದನ್ನು ಸಿಂಗರಿಸುವನು. ಅದರ ಮನಸ್ಸನ್ನು ಸಂತೋಷಪಡಿಸಲು ಬೇಕಾದ್ದನ್ನು ಮಾಡುವನು. ಅದರ ಭೋಗವೃತ್ತಿಯನ್ನು ಜಾಗ್ರತಗೊಳಿಸಲೂ ಯತ್ನಿಸುವನು. ಈ ಮೂಲಕ ಸ್ತ್ರೀಜಾತಿಯು, ಪುರುಷನ, ಮತ್ತು ಇಡೀ ಸಮಾಜದ ಅಧಃಪತನವು ಬಹಳವಾಗಿದೆ.

೪ ಸಾಕುವುದರಲ್ಲೂ ಶಿಕ್ಷಣ ಕೊಡಿಸುವುದರಲ್ಲೂ ಹುಡುಗ ಹುಡುಗೆಯರಲ್ಲಿ ಭೇದವನ್ನು ಕಲ್ಪಿಸಿ ಹುಡುಗೆಯ ಕಡೆಗೆ ಕಡಿಮೆ ಲಕ್ಷ್ಯಗೊಟ್ಟು ತಮ್ಮ ಕರ್ತವ್ಯದಿಂದ ಪರಾಙ್ಮುಖರಾಗುವ ತಂದೆ-ತಾಯಂದಿರು ಪಾಪವನ್ನು ಮಾಡುವರು.

೫ ವಯಸ್ಸಿಗೆ ಬಂದ ಪುರುಷನು ಸ್ವಾತಂತ್ರ್ಯಕ್ಕೆ ಎಷ್ಟು ಅರ್ಹನೋ ಸ್ತ್ರೀಯುಳೂ ಅಷ್ಟೇ ಅರ್ಹಳು.

೬ ಸ್ತ್ರೀಯು ಅಬಲೆಯಲ್ಲ ಆಕೆ ತನ್ನ ಶಕ್ತಿಯನ್ನರಿತುಕೊಂಡರೆ ಪುರುಷನಿಗಿಂತಲೂ ಹೆಚ್ಚು ಬಲಶಾಲಿಯಾಗಬಲ್ಲಳು. ಅವಳು ತಾಯಿಯಾಗಿ ಯಾವ ರೀತಿ ಬಾಲಕನನ್ನು ರೂಪಿಸುವಳೋ, ಪತ್ನಿಯಾಗಿ ಪತಿಗೆ ದಾರಿ ತೋರುವಳೋ, ಆ ಸಂಸ್ಕಾರಗಳಿಗನುಸರಿಸಿಯೇ ಪುರುಷನು ಮಾರ್ಪಡುವನು.

೭ ಸ್ತ್ರೀಜಾತಿಯಲ್ಲಿದ್ದ ಅಪಾರವಾದ ಶಕ್ತಿಯು ವಿದ್ವತ್ತೆಯಿಂದಾಗಲಿ, ಶಾರೀರಿಕ ಬಲದಿಂದಾಗಲಿ ಬಂದುದಲ್ಲ. ಅದು ಅವಳಿಗೆ ಉತ್ಕಟ ಶ್ರದ್ಧೆಯಿಂದ, ಭಾವನೆಯಿಂದ, ಮತ್ತು ತ್ಯಾಗಶಕ್ತಿಯಿಂದ ಪ್ರಾಪ್ತವಾಗಿದೆ. ಅವಳು ಸ್ವಭಾವದಿಂದಲೇ ಕೋಮಲೆ, ಧಾರ್ಮಿಕ ವೃತ್ತಿಯವಳು. ಪುರುಷನು ಶ್ರದ್ಧೆಯನ್ನು ಕಳೆದುಕೊಂಡು ಕೈಕಾಲು ಬಿಟ್ಟಾಗ, ಸುಳ್ಳು ಲೆಕ್ಕದ ತೊಡಕಿನಲ್ಲಿ ಸಿಲುಕಿಕೊಂಡಾಗ, ಅವಳು ಧೀರಳಂತೆ ಸರಳವಾದ ಮಾರ್ಗದಲ್ಲಿ ಮುಂದಡಿಯನ್ನಿಡುತ್ತ ಸಾಗುವಳು.

೮ ಜಗತ್ತಿನಲ್ಲಿ ಧರ್ಮದ ರಕ್ಷಣೆಯು ಪ್ರಾಮುಖ್ಯವಾಗಿ ಸ್ತ್ರೀಜಾತಿಯಿಂದಲೇ

ಆಗಿರುವುದು.

೯ ಸ್ತ್ರೀಜಾತಿಯು ತನ್ನ ಬಲವನ್ನು, ಕಾರ್ಯಕ್ಷೇತ್ರದ ದಿಕ್ಕನ್ನು ಚನ್ನಾಗಿ ಅರಿತುಕೊಂಡರೆ ತಾನು ಪುರುಷನ ಗೊಂಬೆಯೆಂದು ಒಪ್ಪಿಕೊಳ್ಳುವುದೂ ಇಲ್ಲ, ಪುರುಷನನ್ನು ಹಾಗೂ ಅವನ ಪ್ರವೃತ್ತಿಗಳನ್ನು ಅನುಕರಿಸಬೇಕೆಂಬ ಗುರಿಯನ್ನೂ ಇಟ್ಟುಕೊಳ್ಳುವುದಿಲ್ಲ. ಪುರುಷನನ್ನು ಸಂತೋಷಪಡಿಸಲು, ಆಕರ್ಷಿಸಲು ಶರೀರವನ್ನು ಶೃಂಗರಿಸುವುದಿಲ್ಲ. ಜಾಣೆಯಾದ ಸ್ತ್ರೀ ತನ್ನ ಸದ್ಭಾವ ಸದ್ಗುಣಗಳಿಂದ ಶೋಭಿಸುವ ಯತ್ನ ಮಾಡುವಳು.

೧೦ ಸ್ತ್ರೀಜಾತಿಯು ಸಾರ್ವಜನಿಕ ಕಾರ್ಯಗಳಲ್ಲಿ ಪುರುಷನಷ್ಟೇ ಪಾಲುಗೊಳ್ಳಬೇಕು. ಮದ್ಯಪಾನ-ನಿಷೇಧ, ಪತಿತ ಸ್ತ್ರೀಯರ ಉದ್ಧಾರ, ಮುಂತಾದ ಅನೇಕ ಕಾರ್ಯಗಳಲ್ಲಿ ಸ್ತ್ರೀಯೇ ಹೆಚ್ಚು ಜಯವನ್ನು ಸಂಪಾದಿಸಬಲ್ಲಳು.

೧೧ ಸ್ತ್ರೀಯು ಮದುವೆಯಾಗಲೆಬೇಕೆನ್ನುವುದು ಮಿಥ್ಯಾ-ಭ್ರಮೆ. ಅವಳಿಗೂ ಆಜೀವನ ಬ್ರಹ್ಮಚರ್ಯದಿಂದ ಇರುವ ಹಕ್ಕು ಉಂಟು.

೧೨ ಸ್ತ್ರೀಯು ತನ್ನ ಇಚ್ಛೆಗೆ ವಿರುದ್ಧವಾಗಿ ಪತಿಯ ಕಾಮವಾಸನೆಯನ್ನು ತೃಪ್ತಿಪಡಿಸಲು ಬದ್ಧಳಲ್ಲ. ಸತಿಯ ಇಚ್ಛೆಯ ವಿರುದ್ಧ ತನ್ನ ಕಾಮವಾಸನೆಯನ್ನು ತೃಪ್ತಿಪಡಿಸಿಕೊಳ್ಳುವಂತಹ ಪತಿಯು ವ್ಯಭಿಚಾರದೋಷಕ್ಕೆ ಪಾತ್ರನು ಎಂದರೆ ತಪ್ಪಾಗದು.

## ೫ ಅಸ್ಪೃಶ್ಯತೆ

೧ ಅಸ್ಪೃಶ್ಯತೆಯು ಹಿಂದೂ ಧರ್ಮದ ಅಂಗವಲ್ಲ. ಅದು ಹಿಂದೂ ಧರ್ಮದಲ್ಲಿ ಒಳಸೇರಿದ ಹೊಲಸು, ಪಾಪ. ಇದನ್ನು ಹೋಗಲಾಡಿಸುವುದು ಪ್ರತಿಯೊಬ್ಬ ಹಿಂದುವಿನ ಧರ್ಮ, ಪರಮ ಕರ್ತವ್ಯ.

೨ ಅಸ್ಪೃಶ್ಯರೆನಿಸುವ ಜನರು ನಾಲ್ಕು ವರ್ಣಗಳಿಗೆ ಒಳಪಟ್ಟವರು, ಹಿಂದೂ ಧರ್ಮದ ಅಂಗಗಳು.

೩ ಅಸ್ಪೃಶ್ಯರಲ್ಲಿ ಹುಟ್ಟಿದ ಮಾತ್ರದಿಂದ ಅವರು ಅಸ್ಪೃಶ್ಯರೆಂದು ತಿಳಿದರೆ ಅಹಿಂಸಾಧರ್ಮವನ್ನೂ ಸರ್ವಭೂತಾತ್ಮ ಭಾವನೆಯನ್ನೂ ನಾವು ನಿಷೇಧಿಸಿದಂತಾಗುವುದು. ಈ ಅಸ್ಪೃಶ್ಯತೆಯು ಬುಡದಲ್ಲಿ ಸಂಯಮವಿಲ್ಲ; ಉಚ್ಚತನದ ಉದ್ಧಟ ಭಾವನೆಯುಂಟು. ಆದುದರಿಂದ ಇದು ಸ್ಪಷ್ಟವಾದ ಅಧರ್ಮ. ಇದು ಧರ್ಮದ ಹೆಸರಿನಿಂದ ಕೋಟಿಗಟ್ಟಲೆ ಜನರನ್ನು ಗುಲಾಮರೋಪಾದಿ

ಯಲ್ಲಿ ಮಾಡಿರುವುದು.

೪ ಸಾರ್ವಜನಿಕವಾದ ಜಾತ್ರೆ, ಪೇಟೆ, ಅಂಗಡಿ, ಪಾಠಶಾಲೆ, ಧರ್ಮಶಾಲೆ, ಮಂದಿರ, ಕೆರೆ-ಭಾವಿ, ಉಗಿಬಂಡಿ, ಮೋಟಾರು ಮುಂತಾದುವುಗಳಲ್ಲಿ ಉಳಿದ ಹಿಂದುಗಳಂತೆ ಅನಿರ್ಬಂಧವಾಗಿ ಹೋಗಲಿಕ್ಕೂ ಅವುಗಳಿಂದಾಗುವ ಲಾಭಗಳನ್ನು ಪಡೆಯಲಿಕ್ಕೂ ಅಸ್ಪೃಶ್ಯರಿಗೆ ಅಧಿಕಾರವು ಇದ್ದೇ ಇದೆ. ಅವರಿಂದ ಈ ಅಧಿಕಾರವನ್ನು ಕಸಿದುಕೊಳ್ಳುವ ಮನುಷ್ಯನು ಅನ್ಯಾಯವನ್ನು ಮಾಡಿದಂತೆ. ಅಸ್ಪೃಶ್ಯರಿಗೆ ಈ ಅಧಿಕಾರವು ಉಂಟೆಂದು ಒಪ್ಪಿಕೊಂಡವನು, ಅವರ ಮೇಲೆ ಉಪಕಾರ ಹೊರಿಸಿದಂತಾಗುವುದಿಲ್ಲ, ತನ್ನ ತಪ್ಪನ್ನು ತಾನೇ ಸುಧಾರಿಸಿಕೊಂಡಂತಾಗುವುದು.

೫ ನೂರಾರು ವರ್ಷಗಳಿಂದ ಅಸ್ಪೃಶ್ಯರನ್ನು ಅಮಾನುಷ ರೀತಿಯಿಂದ ನಡೆಯಿಸಿದ್ದರಿಂದಲೂ, ಸುಸಂಸ್ಕೃತ ಹಿಂದೂಗಳ ಸಂಸರ್ಗದಿಂದ ಅವರನ್ನು ದೂರ ಇಟ್ಟದ್ದರಿಂದಲೂ, ಅವರ ಸ್ಥಿತಿ ಅತ್ಯಂತ ಕರುಣಾಜನಕವಾಗಿದೆ. ಈಗ ಅವರನ್ನು ಉಳಿದ ವರ್ಣಗಳಷ್ಟು ಉಚ್ಚಕೋಟಿಗೆ ತರಬೇಕಾದರೆ ಸುಸಂಸ್ಕೃತ ಹಿಂದೂಗಳು ವಿಶೇಷವಾಗಿ ಪ್ರಯತ್ನಿಸಬೇಕಾಗುತ್ತದೆ. ಅಸ್ಪೃಶ್ಯರ, ಉಳಿದ ದಲಿತ ಜಾತಿಗಳ, ಅಥವಾ ಹಿಂದುಳಿದ ಜಾತಿಗಳ ಸೇವೆಯನ್ನು ಮಾಡಲು, ತಮ್ಮ ಜೀವನವನ್ನು ಅರ್ಪಣ ಮಾಡುವುದೂ ಈ ಕಾರ್ಯಕ್ಕೆ ಉದಾರ ಅಂತಃಕರಣದಿಂದ ನೆರವಾಗುವುದೂ ಈ ಯುಗದ ಸುಸಂಸ್ಕೃತ ಹಿಂದೂಗಳ ಪರಮ ಪವಿತ್ರವಾದ ಕರ್ತವ್ಯಕರ್ಮ

೬ ಈ ದೃಷ್ಟಿಯಿಂದ ದಲಿತ ವರ್ಗಗಳಿಗೋಸ್ಕರ ಪ್ರತ್ಯೇಕವಾಗಿ ಸಂಸ್ಥೆಗಳನ್ನು ಸ್ಥಾಪಿಸುವುದಕ್ಕೂ, ಅವುಗಳಿಗಾಗಿ ಅನುಕೂಲತೆಗಳನ್ನು ಒದಗಿಸಿಕೊಡುವುದಕ್ಕೂ ಸಾಕಷ್ಟು ಅನುವು ಉಂಟು. ಇಂತಹ ಸಂಸ್ಥೆಗಳು ಈಗಾಗಲೇ ಸ್ಥಾಪಿಸಲ್ಪಟ್ಟಿದ್ದರೆ, ಅನುಕೂಲತೆಗಳನ್ನು ಒದಗಿಸಿಕೊಟ್ಟಿದ್ದರೆ, ಉಳಿದ ಸಾರ್ವಜನಿಕ ಸಂಸ್ಥೆಗಳಿಂದಲೂ ಅನುಕೂಲತೆಗಳಿಂದಲೂ ಲಾಭಪಡೆದುಕೊಳ್ಳಲು ಇದ್ದ ಅವರ ಅಧಿಕಾರವು ಹೊರಟುಹೋಗುವುದಿಲ್ಲ.

೭ ಅಸ್ಪೃಶ್ಯರ ಸ್ಥಿತಿಯನ್ನು ಸುಧಾರಿಸಲು ಹೊರಟಾಗ ಅವರ ಪರಂಪರಾಗತ ಕಸುಬುಗಳನ್ನು ಅವರಿಂದ ಬಿಡಿಸಲು, ಇಲ್ಲವೆ ಅವುಗಳ ಬಗ್ಗೆ ತಿರಸ್ಕಾರ ಹುಟ್ಟಿಸಲು ಯತ್ನಿಸಕೂಡದು. ತಮ್ಮ ಕಸುಬಿನ ಬಗ್ಗೆ ಅವರಲ್ಲಿ ತಿರಸ್ಕಾರವನ್ನು ಹುಟ್ಟಿಸಿದರೆ ಅವರ ಸೇವೆಯನ್ನು ಮಾಡಿದಂತಾಗುವುದಿಲ್ಲ,

ಹಾನಿಯನ್ನು ಮಾಡಿದಂತಾಗುವುದು. ನೇಕಾರನು (ಹಲವು ಪ್ರಾಂತಗಳಲ್ಲಿ ನೇಕಾರರು ಅಸ್ಪೃಶ್ಯರೆನಿಸುವರು) ನೇಯುತ್ತಿರಬೇಕು, ಚರ್ಮಕಾರನು ಚರ್ಮದ ಕಾರ್ಯವನ್ನು ಮಾಡುತ್ತಿರಬೇಕು, ಮತ್ತು ಭಂಗಿಯು ಪಾಯ್‌ಖಾನೆಗಳನ್ನು ಸ್ವಚ್ಛ ಮಾಡುತ್ತಿರಬೇಕು. ಹೀಗೆ ಅವರು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿದ್ದರೂ ಅವರು ಅಸ್ಪೃಶ್ಯರೆಂದು ಎಣಿಸಲ್ಪಡದೆ ಹೋದರೆ ನಿಜವಾಗಿ ಅಸ್ಪೃಶ್ಯತಾನಿವಾರಣೆಯಾಯಿತೆನ್ನಬಹುದು.

೮ ಭಂಗಿಯು ಸಮಾಜದ ಹೊಲಸನ್ನು ದೂರ ಮಾಡಿ ಅದನ್ನು ದಿನಾಲು ಸ್ವಚ್ಛವಿಡುವ ಪವಿತ್ರ ಕೆಲಸವನ್ನು ಮಾಡುವನು. ಈ ಕಾರ್ಯವನ್ನು ಅವನು ನಿಯಮಿತವಾಗಿ ಮಾಡದಿದ್ದರೆ ಇಡೀ ಸಮಾಜವೇ ಮರಣೋನ್ಮುಖವಾಗುವುದು. ತಮ್ಮ ಕಸುಬುಗಳನ್ನು ಮಾಡುತ್ತಿರುವುದರಿಂದ ಅವರು ಇಷ್ಟು ಅಸಂಸ್ಕೃತರೂ ನಿರ್ಬಲರೂ ಆಗಿರುವರೆಂದು ಹೇಳುವುದು ಯೋಗ್ಯವಾದುದಲ್ಲ. ಈ ಕಸುಬುಗಳೂ ಉಳಿದ ಕಸುಬುಗಳಷ್ಟೇ ಉಚ್ಚವೆಂದು ಭಾವಿಸಬೇಕು. ಉಳಿದವರ ಕಸುಬುಗಳಂತೆ ಇವರ ಕಸುಬುಗಳಲ್ಲಿಯೂ ಸುಧಾರಣೆ ಮಾಡುವುದು ಅವಶ್ಯವಾಗಿದೆ. ಆದರೆ ಇದು ಇಲ್ಲಿ ತೀರ ಅಪ್ರಸ್ತುತ ಪ್ರಶ್ನೆ. ಸುಸಂಸ್ಕೃತ ಹಿಂದೂಗಳು ಈ ಕಸುಬುಗಳನ್ನು ಮಾಡಿ ಅವುಗಳಲ್ಲಿ ಸುಧಾರಣೆ ಮಾಡಿ ತೋರಿಸಬಹುದು.

೯ ಸತ್ತ ದನಗಳ ಮಾಂಸವನ್ನು ತಿನ್ನುವ ರೂಢಿಯು ಅಸ್ಪೃಶ್ಯರಲ್ಲಿದೆ. ಇದರಿಂದ ಇವರು ಎಷ್ಟು ಕರುಣಾಜನಕವಾದ ಬಡತನದಲ್ಲಿದ್ದಾರೆ ಎನ್ನುವುದು ತಿಳಿಯುವುದು. ಅವರಿಗೆ ಚನ್ನಾಗಿ ತಿಳಿಹೇಳುವುದರಿಂದಲೂ ಅವರ ಬಡತನವನ್ನು ದೂರಮಾಡುವುದರಿಂದಲೂ ಈ ರೂಢಿಯು ಇಲ್ಲದಂತಾಗುವುದು.

೧೦ ಮನುಷ್ಯನು ತನ್ನ ಆಚರಣೆಯನ್ನು ಮಾತ್ರ ಸ್ವಚ್ಛವಾಗಿಟ್ಟುಕೊಂಡರೆ ಸುಸಂಸ್ಕೃತನೆನಿಸಲಾರನು. ತನಗೆ ಅಶುದ್ಧವೆನಿಸಿದ್ದನ್ನು ಅನ್ಯರು ಮಾಡಲೇಬೇಕಾಗುವಂತೆ ಆಚರಿಸುವುದು ಅಸಂಸ್ಕೃತತೆಯ ಲಕ್ಷಣ. ತಾವು ಸುಸಂಸ್ಕೃತರೆಂದು ತಿಳಿಯುವ ಜನರು ಅಸ್ಪೃಶ್ಯರಿಗೆ ತಮ್ಮ ಎಂಜಲನ್ನೂ, ತಂಗಳು ಅಶುದ್ಧ ಆಹಾರವನ್ನೂ ನೀಡುವರು. ಅವರು ಪಶುಗಳಿಗಿಂತಲೂ ಕೀಳೆಂದು ಭಾವಿಸಿ ಅವರೊಡನೆ ಅತ್ಯಂತ ಕೀಳಾಗಿ ವರ್ತಿಸುವರು. ಈ ಆಚರಣೆ ಅನಾಗರಿಕತೆಯನ್ನು ವ್ಯಕ್ತಮಾಡುವುದು, ಅಲ್ಲದೆ ಪಾಪಮಯವಾಗಿರುವುದು.

## ೬ ಖಾದ್ಯಾಖಾದ್ಯ ವಿವೇಕ

೧ ಮನುಷ್ಯನು ಪ್ರತಿಯೊಂದು ಪದಾರ್ಥವನ್ನೂ ತಿನ್ನತಕ್ಕ ಸರ್ವಭಕ್ಷಕ ಪ್ರಾಣಿಯಲ್ಲ. ಅವನು ತಿನ್ನಬೇಕಾದ ಪದಾರ್ಥಗಳಿಗೂ ಒಂದು ಎಲ್ಲೆ ಇದೆ. ವರ್ಣಧರ್ಮದೊಡನೆ ಇದರ ಸಂಬಂಧವೇನೂ ಇಲ್ಲ. ಆಹಾರ-ವಿಷಯದಲ್ಲಿ ಸ್ಪೃಶ್ಯಾಸ್ಪೃಶ್ಯತೆ ಪಾಲಿಸುವುದು ದೋಷಪೂರ್ಣವಾದುದು. ಆದರೆ ಇದರಲ್ಲಿ ಬೇಕು ಬೇಡ ಎಂಬ ತಾರತಮ್ಯವುಂಟು.

೨ ಸ್ವಚ್ಛತೆಯ ನಿಯಮಗಳನ್ನು ಪಾಲಿಸುತ್ತ, ತಿನ್ನಲು ಅರ್ಹವಾದದ್ದನ್ನು ಸರ್ವವರ್ಣದವರೂ ಒಂದೇ ಪಂಕ್ತಿಯಲ್ಲಿ ಕುಳಿತು ತಿಂದರೆ ಯಾವ ದೋಷವೂ ಇಲ್ಲ. ಇಂಥ ವರ್ಣದವನೇ ಅಡಿಗೆ ಮಾಡಬೇಕೆಂಬ ಆವಶ್ಯಕತೆಯೂ ಇಲ್ಲ.

೩ ಇಂದು ನಾವು ಭೋಜನ-ವ್ಯವಹಾರಕ್ಕೆ ಕೊಟ್ಟ ಮಹತ್ವವು ಮಡಿ ಮೈಲಿಗೆಯ ರೂಢಿಗೆ ಪೋಷಕವಾಗಿದೆ, ನಮ್ಮ ರುಚಿ-ಅರುಚಿಯ ಭಾವನೆಯನ್ನು ಬೆಳೆಸುತ್ತದೆ. ಇದರಿಂದ ಉತ್ತೇಜನ ದೊರೆಯುವುದು ಸಂಯಮಕ್ಕಲ್ಲ, ಭೋಗಕ್ಕೆ.

೪ ಆದುದರಿಂದ ಜಾತಿ, ಸಮಾಜ, ಧರ್ಮ, ಮುಂತಾದ ಭೇದಗಳ ದೃಷ್ಟಿಯಿಂದ ಮಾಡಿದ ಪಾಕವೂ ಪಂಕ್ತಿಭೇದವೂ ಧರ್ಮದ ಲಕ್ಷಣವಲ್ಲ. ಈ ಭೇದದಿಂದ ಹಿಂದೂ ಧರ್ಮಕ್ಕೆ ಹಾನಿಯಾಗಿದೆ.

## ೭ ವಿವಾಹ

೧ ವಿವಾಹದಿಂದ ಮನಬಂದಷ್ಟು ಸಂಭೋಗಿಸಲು ಸ್ವಾತಂತ್ರ್ಯ ದೊರೆಯುವುದೆಂಬ ಕಲ್ಪನೆಯು ಪಾಪಮಯ. ಸ್ತ್ರೀ-ಪುರುಷರಿಬ್ಬರೂ ಸಂತತಿಯ ಇಚ್ಛೆಯಿಂದ ಸಂಭೋಗ ಮಾಡಿದರೆ ಮಾತ್ರ ಅದು ಧರ್ಮಯುಕ್ತವಾಗಬಲ್ಲುದು. ಈ ಇಚ್ಛೆಯನ್ನು ಸಿದ್ಧಿಗೊಯ್ಯುವ ಶುದ್ಧ ರೀತಿಯೇ ವಿವಾಹ.

೨ ಲಗ್ನದ ಇಚ್ಛೆ ಇದ್ದ ಯುವಕ ಯುವತಿಯರು ತಮಗೆ ಯೋಗ್ಯರಾದ ವಧು ವರರನ್ನು ಸ್ವತಃ ಆರಿಸಿಕೊಳ್ಳುವುದು ಸಾಮಾನ್ಯವಾಗಿ ಅಷ್ಟು ಯೋಗ್ಯವೆಂದು ಎನಿಸುವುದಿಲ್ಲ. ಏಕೆಂದರೆ ಇದರಿಂದ ಆಗಾಗ್ಗೆ ಮಾನಸಿಕ ವ್ಯಭಿಚಾರವೂ ಕೆಲವು ಪ್ರಸಂಗಗಳಲ್ಲಿ ಶಾರೀರಿಕ ವ್ಯಭಿಚಾರವೂ ಆಗುವ ಸಾಧ್ಯತೆ ಇದೆ. ಅಲ್ಲದೆ ಕಡಮೆ ಅನುಭವವುಳ್ಳ ಯುವಾವಸ್ಥೆಯಲ್ಲಿ ಭೋಗೇಚ್ಛೆಯು ತೀವ್ರವಾಗಿದ್ದಾಗ ಸ್ವತಃ ವಧು ವರರನ್ನು ಆಯ್ದು ಒಪ್ಪಿ ಮಾಡಿಕೊಂಡ

ಮದುವೆ ಅಷ್ಟೊಂದು ಯೋಗ್ಯವಾಗುವುದೆಂದು, ಜಾಣ್ಮೆಯದಾಗುವುದೆಂದು ಹೇಳಲಾಗುವುದಿಲ್ಲ.

೩ ಆದ್ದರಿಂದ ವಿವಾಹಿತರಾಗುವವರು ತಮ್ಮ ಇಚ್ಛೆಯನ್ನೂ, ಮತ್ತು ವಿವಾಹದ ವಿಷಯವಾಗಿ ತಾವು ಮಾಡಿದ ಸಂಕಲ್ಪಗಳೇನಾದರೂ (ವಿಧವಾ ವಿವಾಹ, ಅಂತರ್ಜಾತೀಯ ವಿವಾಹ, ವರದಕ್ಷಿಣೆ ಕನ್ಯಾಶುಲ್ಕ ಇಲ್ಲದೆ ವಿವಾಹ ವಾಗುವ ಇಚ್ಛೆ ಮುಂತಾದುವು)ಇದ್ದರೆ ಅವನ್ನೂ, ತಮ್ಮ ಹಿರಿಯರಿಗೆ ಇಲ್ಲವೆ ಪಾಲಕರಿಗೆ ಹೇಳಿ ಯೋಗ್ಯರಾದ ವಧೂ ವರರನ್ನು ಹುಡುಕಲು ಬಿನ್ನವಿಸಿಕೊಳ್ಳಬೇಕು.

೪ ಹಿರಿಯರು ಯುವತಿಯ ಮತ್ತು ಯುವಕನ ಸ್ವಭಾವ, ಗುಣದೋಷ ಗಳನ್ನೂ ವಿಚಾರಗಳನ್ನೂ ಧ್ಯಾನದಲ್ಲಿಟ್ಟುಕೊಂಡು ಅವರಿಗೆ ಅನುರೂಪರಾದ ಜೊತೆಗಾರರನ್ನು ಹುಡುಕಲು ಯತ್ನಿಸಬೇಕು. ಇಬ್ಬರಿಗೂ ಅವರವರ ಗುಣ ದೋಷಗಳನ್ನು ತಿಳಿಸಬೇಕು. ಇಬ್ಬರ ಜೀವನದಲ್ಲಿಯೂ ಅವಶ್ಯವಾಗಿ ಅರಿತು ಕೊಳ್ಳಲೇಬೇಕಾದಂಥ ಸಂದರ್ಭಗಳು ಜರುಗಿದ್ದರೆ ಅವನ್ನೂ ತಿಳಿಸಬೇಕು. ಅಂಥ ಸಂಗತಿಗಳನ್ನು ಮುಚ್ಚಿಡಕೂಡದು.

೫ ಹಿರಿಯರಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಂಡ ಮೇಲೆ ಪರಸ್ಪರ ಭೆಟ್ಟಿಯಾಗಿ ಪರಿಚಯ ಮಾಡಿಕೊಳ್ಳಬೇಕೆಂದೂ ಮಾತುಕತೆಯಾಡಬೇಕೆಂದೂ ಯುವಕ ಯುವತಿಯರು ಬಯಸಿದರೆ ಅವರಿಗೆ ಹಾಗೆ ಮಾಡಲು ಮರ್ಯಾದೆ ಯಿಂದ ಯೋಗ್ಯ ವ್ಯವಸ್ಥೆ ಮಾಡಿಕೊಡಬೇಕು.

೬ ಆ ಮೇಲೆ ಇಬ್ಬರೂ ವಿವಾಹಿತರಾಗಲು ನಿಶ್ಚಯಿಸಿದರೆ ವಿವಾಹವನ್ನು ಗೊತ್ತುಮಾಡಬೇಕು, ನಿಶ್ಚಯ ಮಾಡಬೇಕು. ಇಬ್ಬರಲ್ಲಿ ಯಾರಾದರೂ ಅನಿಶ್ಚಿತರಾಗಿ, ಅಸಂತುಷ್ಟರಾಗಿ ಇರುವ ವರೆಗೆ ನಿಶ್ಚಯ ಮಾಡಬಾರದು. ಹಿರಿಯರು ಎರಡನೇ ಕಡೆಗೆ ಹುಡುಕಲು ಪ್ರಯತ್ನಿಸಬೇಕು.

೭ ನಿಶ್ಚಯವಾದ ಬಳಿಕ, ಮತ್ತು ಮದುವೆಗಿಂತ ಮೊದಲು, ಪರಸ್ಪರ ಸ್ಪರ್ಶ ಮಾಡದೆ ಬ್ರಹ್ಮಚರ್ಯದಿಂದ ಇದ್ದು ಆಗ್ರಹದಿಂದ ಇಬ್ಬರೂ ಭೆಟ್ಟಿ ಯಾದರೆ, ಪತ್ರವ್ಯವಹಾರ ಮಾಡಿದರೆ ಅದು ದೋಷವೆನಿಸುವುದಿಲ್ಲ. ಸಂಯಮೀ ಸ್ತ್ರೀ-ಪುರುಷರು ಈ ಕಾಲದಲ್ಲಿ ತಮ್ಮ ಭಾವೀ ವಧು ವರರ ಕೂಡ ಭೋಗದ ಮಾತುಗಳನ್ನಾಡದಿರುವುದು, ಅಂಥ ಕಲ್ಪನೆಗಳ ಬಗ್ಗೆ ಚರ್ಚಿಸ ದಿರುವುದು ಲೇಸು. ಅವರು ತಮ್ಮ ಉತ್ಕರ್ಷವಾಗುವಂತಹ ಮಾತುಗಳನ್ನಾಡ

ಬೇಕು, ಆ ಬಗ್ಗೆ ಯೋಚಿಸಬೇಕು.

೮ ವಿವಾಹವಾದ ಮೇಲೆ ವಿವಾಹವು ಧರ್ಮವೆಂದು ಅವರು ತಿಳಿಯುವರು. ಧರ್ಮದಲ್ಲಿ ಮರ್ಯಾದೆ, ವಿವೇಕ ಮುಂತಾದುವು ಉಂಟು. ಮರ್ಯಾದೆಯಿಂದಲೂ ವಿವೇಕದಿಂದಲೂ ಇದ್ದರೆ ದಂಪತಿಗಳು ಗೃಹಸ್ಥ-ಧರ್ಮವನ್ನು ಪಾಲಿಸಿದಂತೆ. ಮರ್ಯಾದೆ ಬಿಟ್ಟು ನಡೆಯುವವರು ಧರ್ಮನಿಷ್ಠರಲ್ಲ, ಸ್ವೇಚ್ಛಾಚಾರಿಗಳು.

೯ ಸಂತತಿಯ ಇಚ್ಛೆ ಇಲ್ಲದೆ ವಿವಾಹಸಂಬಂಧವಾಗಲಾರದು. ಆದರೆ ವಿವಾಹಿತರಾದ ಮೇಲೆ ಇಬ್ಬರೂ ಸಂಯಮಿಗಳಾಗಿ ಇರಬೇಕೆಂದು ಬಯಸಿದರೆ ವಿವಾಹವು ವ್ಯರ್ಥವಾಯಿತೆಂದು ತಿಳಿಯಕೂಡದು. ಸ್ತ್ರೀ-ಪುರುಷರಿಬ್ಬರೂ ಕೂಡಿ ಮಾಡತಕ್ಕ ಸಾಮಾಜಿಕ ಕಾರ್ಯಗಳು ಎಷ್ಟೋ ಇವೆ. ಅಂಥ ಕಾರ್ಯಗಳನ್ನು ಇಬ್ಬರೂ ಸಹಧರ್ಮಚಾರಿಗಳಾಗಿ ಮಾಡಬಹುದು. ತಮ್ಮ ಅತ್ಯಂತ ನಿಕಟ ಸಂಬಂಧದ ಉಪಯೋಗವನ್ನು ಈ ಕಾರ್ಯಗಳಿಗಾಗಿ ಮಾಡಿಕೊಡಬಹುದು.

೧೦ ಪ್ರಜೋತ್ಪಾದನೆಯ ಇಚ್ಛೆ ಇಲ್ಲದಿರುವಾಗ, ಇಬ್ಬರಲ್ಲಿ ಒಬ್ಬರಿಗೆ ಪ್ರಜೆಯನ್ನು ಹುಟ್ಟಿಸುವ ಶಕ್ತಿ ಇಲ್ಲದಿದ್ದಾಗ, ಮತ್ತು ಪರಸ್ಪರರ ಸಮ್ಮತಿ ಇಲ್ಲದೆ ಪತಿ-ಪತ್ನಿಯರೇ ಸಂಭೋಗಿಸಿದರೂ ಅದು ಪಾಪಮಯವೇ ಸರಿ

## ೮ ಸಂತತಿ-ನಿಯಮನ

೧ ಯೋಚನೆ ಮಾಡದೆ ಸಂತತಿಯನ್ನು ಬಯಸುತ್ತಿರುವುದೂ ಬೆಳೆಸುತ್ತ ಹೋಗುವುದೂ ಜಡತೆಯ ಲಕ್ಷಣ.

೨ ಯೋಚನೆ ಮಾಡದೆ ಪ್ರಜಾವೃದ್ಧಿ ಮಾಡುತ್ತಿರುವುದನ್ನು ಇಂದು ತಡೆಗಟ್ಟುವುದು ಅವಶ್ಯವಿದೆ. ಇದಕ್ಕೆ ಧರ್ಮಮಾನ್ಯವಾದ ಒಂದೇ ಸಾಧನವೆಂದರೆ ಬ್ರಹ್ಮಚರ್ಯ.

೩ ಸಂತತಿ-ನಿಯಮನದ ಕೃತ್ರಿಮ ಉಪಾಯಗಳು ಧರ್ಮಕ್ಕೂ ನೀತಿಗೂ ವಿರುದ್ಧವಾಗಿವೆ. ಈ ಉಪಾಯಗಳು ಕೊನೆಗೆ ವಿನಾಶದ ಮಾರ್ಗಕ್ಕೆ ಒಯ್ಯುವಂತಹವು. ಇವುಗಳಿಂದ ಎಲ್ಲ ತರದಿಂದಲೂ ಪ್ರಜಾಹಾನಿಯೂ ಅಧಃಪತನವೂ ಆಗುವುದು.

## ೯ ದಂಪತಿಗಳಲ್ಲಿ ಬ್ರಹ್ಮಚರ್ಯ

೧ ವಿವಾಹಿತ ಸ್ತ್ರೀ-ಪುರುಷರು ಋತುಕಾಲದಲ್ಲಿ ಭೋಗಿಸಲೇಬೇಕೆಂದು

ತಿಳಿಯುವುದು ತಪ್ಪು. ಇಬ್ಬರಲ್ಲಿ ಒಬ್ಬರಿಗೆ ಇಚ್ಛೆ ಇಲ್ಲದಿದ್ದರೂ ಇನ್ನೊಬ್ಬರ ಭೋಗೇಚ್ಛೆಯನ್ನು ತೃಪ್ತಿಪಡಿಸಲೇಬೇಕೆಂದು ತಿಳಿಯುವುದೂ ತಪ್ಪು.

೨ ಆದ್ದರಿಂದ, ಇಬ್ಬರಲ್ಲಿ ಯಾರೊಬ್ಬರ ವಿಷಯೇಚ್ಛೆಯು ಶರೀರವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವಷ್ಟು ದುರ್ಬಲವಾಯಿತೆಂದರೆ ಬ್ರಹ್ಮಚರ್ಯ ವ್ರತವನ್ನು ಕೈಕೊಳ್ಳಲು ಅವರಿಗೆ ಅಧಿಕಾರವುಂಟು. ಹಾಗೆ ಮಾಡುವ ಕಾಲದಲ್ಲಿ ಅವರು ತಮ್ಮ ಸಹಚರಿಯ ಸಹಕಾರವನ್ನು ಅಪೇಕ್ಷಿಸುವರು. ಆದರೆ ಆಗ ಇನ್ನೊಬ್ಬರ ಸಂಮತಿ ಪಡೆಯುವುದು ಅವಶ್ಯವೆಂದು ಯಾರೂ ಭಾವಿಸಕೂಡದು.

೩ ಬ್ರಹ್ಮಚರ್ಯದಿಂದ ಇರಬೇಕೆಂದು ಸ್ತ್ರೀಯು ನಿಶ್ಚಯಿಸಿದರೆ, ಮತ್ತು ಅದಕ್ಕೆ ಪತಿಯು ಸಂಮತಿಯನ್ನೀಯದಿದ್ದರೆ, ಅವಳ ಸ್ಥಿತಿ ಕಠಿಣವಾಗುವ ಸಂಭವವುಂಟು. ಬ್ರಹ್ಮಚರ್ಯದಿಂದ ಇರುವುದೇ ತನ್ನ ಧರ್ಮವೆಂದು ಚನ್ನಾಗಿ ಅರಿತುಕೊಂಡ ಸ್ತ್ರೀಯು ಈ ಎಡರುಗಳನ್ನು ಸತ್ಯಾಗ್ರಹದ ಬಲದಿಂದ ಸಹಿಸಬೇಕು. ದುಃಖಗಳು ಬಂದರೆ ಅವನ್ನೂ ಸಹಿಸಬೇಕು.

೪ ಬ್ರಹ್ಮಚರ್ಯದಿಂದ ಇರಬೇಕೆಂದು ಪತಿಯು ನಿಶ್ಚಯಿಸಿದರೆ ತೀವ್ರ ಭೋಗೇಚ್ಛೆಯುಳ್ಳ ಸ್ತ್ರೀಯ ಸ್ಥಿತಿ ಬಹು ಕಠಿಣವಾಗುವುದು. ಕ್ಶಾಯೆಯೂ ಲೋಕಮತವೂ ಪತ್ನಿಗೆ ಪ್ರತಿಕೂಲವಾಗಿರುವುದೇ ಇದಕ್ಕೆ ಕಾರಣ. ಆದರೆ ಧರ್ಮಭಾವನೆಯಿಂದ ಬ್ರಹ್ಮಚರ್ಯ-ವ್ರತವನ್ನು ಸ್ವೀಕರಿಸುವ ಪತಿಯು ತನ್ನ ಪತ್ನಿಯ ಮಾರ್ಗವನ್ನು ಸುಗಮಮಾಡಿಕೊಡುವನು. ಅವನು ಕ್ಶಾದೆಯ ಅಭಿಪ್ರಾಯವನ್ನು ಲೆಕ್ಕಿಸದೆ, ಇಂಥ ಸ್ತ್ರೀಯ ಸಂಗಡ ತಾನು ಧರ್ಮವಿವಾಹದಿಂದಲೆ ಕಟ್ಟಲ್ಪಟ್ಟವನೆಂದು ತಿಳಿಯುವಂಥ, ಸಮಾಜದಿಂದ ಹಾಗೂ ಕಟ್ಟಳೆಯ ಮೂಲಕ ಉಂಟಾಗುವ ಎಲ್ಲ ಸಂಕಟಗಳನ್ನು ಎದುರಿಸಿ ಸಹಿಸುವಂಥ. ಯೋಗ್ಯನಾದ ಪುರುಷನನ್ನು ಅವಳಿಗಾಗಿ ಹುಡುಕುವನು. ಇಂತು ಕ್ಶಾದೆ-ಸುಧಾರಣೆಯ ಮಾರ್ಗವನ್ನು ಸಹ ಅವನು ಸರಳಮಾಡಿಕೊಡುವನು. ಇಂಥ ಹೊಸ ಪತಿಯು ಸಿಗುವ ವರೆಗೆ ಅವಳನ್ನು ಅವನು ಆದರದಿಂದ ಗೆಳೆಯನಂತೆ ತನ್ನಲ್ಲಿಯೇ ಇಟ್ಟುಕೊಳ್ಳುವನು.

## ೧೦ ವಿಧವಾ-ವಿವಾಹ

೧ ಹಿಂದೂ ವಿಧವೆಯು ತ್ಯಾಗದ ಮತ್ತು ಪವಿತ್ರತೆಯ ಮೂರ್ತಿ. ಇವಳು

ತಾಯಿಯಂತೆ ಸರ್ವರಿಗೂ ಪೂಜ್ಯಳು. ಇವಳು ಅಶುಭಕಾರಿಯೆಂದು ತಿಳಿಯುವ ಹಿಂದೂ ಸಮಾಜವು ಬಹು ದೊಡ್ಡ ಅಪರಾಧವನ್ನು ಮಾಡುತ್ತಿರುವುದು. ಶುಭ-ಕಾರ್ಯಗಳಿಗೆ ಅವಳನ್ನು ಕರೆಸಿ ಅವಳಿಂದ ಆಶೀರ್ವಾದಗಳನ್ನು ಪಡೆಯಲು ಅವಶ್ಯವಾಗಿ ಪ್ರಯತ್ನಿಸಬೇಕು. ಪವಿತ್ರಳಾದ ವಿಧವೆಯು ಹಿಂದೂ ಸಮಾಜದ ಭೂಷಣವೆಂದು ತಿಳಿದು ಅವಳ ಮಾನ ಮರ್ಯಾದೆಯನ್ನೂ ಪ್ರತಿಷ್ಠೆಯನ್ನೂ ಹೆಚ್ಚಿಸಲು ಎಲ್ಲರೂ ಯತ್ನಿಸಬೇಕು.

೨ ಸ್ತ್ರೀಜಾತಿಯ ಬಗ್ಗೆ ಪ್ರಚಾರದಲ್ಲಿರುವ ಭಾವನೆಗಳು ವಿಧವೆಗೆ ಘೋರವಾದ ಅನ್ಯಾಯವನ್ನು ಮಾಡಿರುವವು. ಆದುದರಿಂದ ಹಿಂದೂ ವಿಧವೆಯ ಸ್ಥಿತಿಯೂ ಅಸ್ಪೃಶ್ಯರಂತೆ ಅತ್ಯಂತ ದಯಾಜನಕವಾಗಿದೆ.

೩ ವಿಧವೆಯು ತ್ಯಾಗದ ಮೂರ್ತಿ. ಆದರೆ ವೈಧವ್ಯವು ಬಲಾತ್ಕಾರದಿಂದ ಪಾಲಿಸಲು ಹಚ್ಚುವಂಥ ವ್ರತವಲ್ಲ. ಬಲಾತ್ಕಾರದಿಂದ ಮಾಡಿಸಿದ ತ್ಯಾಗವು ಅವಳಲ್ಲಿದ್ದ ದಿವ್ಯತೆಯನ್ನು ನಾಶಮಾಡುವುದು. ಅವಳನ್ನು ಪೂಜ್ಯಳನ್ನಾಗಿ, ಆದರ್ಶಭೂತಳನ್ನಾಗಿ ಮಾಡುವ ಬದಲು ದಯೆಗೆ ಪಾತ್ರಳನ್ನಾಗಿ ಮಾಡಿಬಿಡುವುದು.

೪ ಆದ್ದರಿಂದ ಪುನರ್ ವಿವಾಹವನ್ನು ಮಾಡಿಕೊಳ್ಳಲು ವಿಧುರರಿಗೆ ಎಷ್ಟು ಅಧಿಕಾರವಿರುವುದೋ ಅಷ್ಟೇ ಅಧಿಕಾರವು ವಿಧವೆಯರಿಗೂ ಇರುವುದು.

೫ ಬಾಲ್ಯವಿವಾಹದ ಸ್ವಾಭಾವಿಕ ಪರಿಣಾಮವೇ ಬಾಲವಿಧವೆ. ೧೫-೧೬ ವರ್ಷಕ್ಕಿಂತ ಮೊದಲು ಕನ್ಯೆಯ ವಿವಾಹವು ಆಗಕೂಡದು. ೧೫-೧೬ ವರ್ಷಕ್ಕಿಂತ ಚಿಕ್ಕವಳಿದ್ದ ಕನ್ಯೆಗೆ ಬಂದ ವೈಧವ್ಯ ವೈಧವ್ಯವೇ ಅಲ್ಲ. ಇಂತಹ ವಿಧವೆಯು ಕುಮಾರಿಯೆಂದು ತಿಳಿಯಬೇಕು. ಕುಮಾರೀ ಕನ್ಯೆಯ ಮದುವೆಯನ್ನು ಮಾಡಲು ಹಿರಿಯರು ಚಿಂತಿಸುವಂತೆ ಈ ಕುಮಾರೀ ವಿಧವೆಯ ಮದುವೆ ಮಾಡಲೂ ಚಿಂತಿಸಬೇಕು. ಕುಮಾರಿಯ ಮದುವೆಯಂತೆ ಇವಳ ಮದುವೆಯನ್ನೂ ಮಾಡಬೇಕು.

೬ ಮದುವೆಯಾಗಲಿಚ್ಛಿಸುವ ಹಿಂದೂ ಯುವಕರು ಇಂತಹ ಬಾಲ ವಿಧವೆಯರನ್ನೇ ಮದುವೆಯಾಗುವ ಹಟಹಿಡಿದರೆ ಅವರು ಹಿಂದೂ ವಿಧವೆಯರ ಕಲ್ಯಾಣ ಮಾಡಿದಂತಾಗುವುದು. ತರುಣರಾದ ವಿಧುರರು ಪುನಃ ಮದುವೆ ಮಾಡಿಕೊಳ್ಳಬಯಸಿದರೆ ವಿಧವೆಯರನ್ನೇ ಮದುವೆಯಾಗುವುದು ತಮ್ಮ ಧರ್ಮವೆಂದು ತಿಳಿಯಬೇಕು.

## ೧೧ ವರ್ಣಾಂತರ ವಿವಾಹ

೧ ಸಂಯಮ, ಸುಖ, ಮತ್ತು ವರ್ಣದ (ವರ್ಣ ಎಂದರೆ ಕಸುಬಿನ ಅಧಿಕಾರ) ದೃಷ್ಟಿಯಿಂದ ತನ್ನ ವರ್ಣದಲ್ಲಿಯೇ ಮದುವೆಯಾಗುವುದು ಒಳಿತು. ಆದರೆ ಈಗ ವರ್ಣವ್ಯವಸ್ಥೆಯು ಲೋಪವಾದದ್ದರಿಂದ ಸ್ವಧರ್ಮೀಯರಲ್ಲಿಯೇ ಗುಣಕರ್ಮಗಳನ್ನು ನೋಡಿ ಶರೀರ-ಸಂಬಂಧವನ್ನು ಬೆಳೆಸುವುದು ಯೋಗ್ಯ. ಇಂತಹ ವರ್ಣಾಂತರ-ವಿವಾಹವು ನಿರ್ದೋಷವಾಗಿರುವುದು.

೨ ಪರದೇಶೀಯರೊಡನೆ, ಪರಧರ್ಮೀಯರೊಡನೆ ವಿವಾಹವಾಗಲು ಧರ್ಮದ ಪ್ರತಿಬಂಧವೇನೂ ಇಲ್ಲ. ಆದರೆ ಅದರಲ್ಲಿ ಅನೇಕ ವಿಘ್ನಗಳು ಬರುವುದುಂಟು. ಆದ್ದರಿಂದ ಇಂಥ ಸಂಬಂಧಗಳು ಅಪರೂಪವಾಗಿ ನಡೆದರೆ ಮಾತ್ರ ಶೋಭಿಸುವವು. ಆದರೆ ಅವುಗಳ ಉದ್ದೇಶವು ಪಾರಮಾರ್ಥಿಕ ಆಗಿರಬೇಕು.

ಚತುರ್ಥ ಖಂಡ

# ಸತ್ಯಾಗ್ರಹ

— ೦ —

## ೧ ಸತ್ಯಾಗ್ರಹ-ಧರ್ಮ

೧ ದ್ವಿತೀಯ ಖಂಡದಲ್ಲಿ ಸತ್ಯಾಗ್ರಹವನ್ನು ಕುರಿತು ಸಾಮಾನ್ಯವಾದ ಒಂದು ಪ್ರಕರಣವುಂಟು. ಈ ಪ್ರಕರಣವನ್ನು ಓದುವ ಮೊದಲು ಅದನ್ನು ಮತ್ತೊಮ್ಮೆ ಓದಿಕೊಳ್ಳಬೇಕು.

೨ ವ್ಯಕ್ತಿ ಮತ್ತು ಸಮಾಜಗಳ ನಡುವಿನ ಸಂಬಂಧವು ಹೀಗಿದೆ: ಯಾವ ಸಮಾಜದಲ್ಲಿ ಒಂದು ವ್ಯಕ್ತಿಯ ಜನ್ಮವಾಗುವುದೋ ಆ ಸಮಾಜದ ಒಟ್ಟಾರೆ ಧರ್ಮದಲ್ಲಿ ಆದ ಪ್ರಗತಿಗಿಂತ ಆ ವ್ಯಕ್ತಿಯ ಪ್ರಗತಿ ಬಹಳ ಹೆಚ್ಚಾಗಿ ಮುಂದುವರಿಯಲಾರದು. ಧರ್ಮವಿಚಾರದಲ್ಲಿ, ಅಥವಾ ಧರ್ಮಸಾಧನೆಯಲ್ಲಿ ಭೂತಕಾಲದ ಓರ್ವ ಮಹಾಪುರುಷನಿಗಿಂತ ಇಂದಿನ ಮಹಾಪುರುಷನು ಮುಂದುವರಿದಿದ್ದರೆ ಆ ಪ್ರಾಚೀನ ಮಹಾಪುರುಷನ ಕಾಲದ ಸಮಾಜಕ್ಕಿಂತಲೂ ಇಂದಿನ ಸಮಾಜವು ಧರ್ಮ-ವಿಚಾರದಲ್ಲೂ ಸಾಧನದಲ್ಲೂ ಮುಂದುವರಿದಿರುವುದೇ ಅದಕ್ಕೆ ಕಾರಣವೆನ್ನಬಹುದು. ಹೀಗೆ ಮಾನವ-ಸಮಾಜದಲ್ಲಿ ಧರ್ಮದ

ಉತ್ತರೋತ್ತರ ಶುದ್ಧಿಯಾಗುತ್ತಿರುವುದೆಂದು ನಿರೀಕ್ಷಿಸಬಹುದು.

೩ ಆದ್ದರಿಂದ, ಯಾರಾದರೂ ತಮ್ಮ ಸುತ್ತುಮುತ್ತಲು ಒಡೆದು ಕಾಣು ವಂತೆ ನಡೆಯುತ್ತಿರುವ ಅಧರ್ಮದ ಕಡೆಗೆ ಗಮನ ಕೊಡದೆ ತಮ್ಮ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಹೊರಟರೆ ಅದು ಶಕ್ಯವಾಗಲಾರದು.

೪ ಯಾವುದೊಂದು ವ್ಯಕ್ತಿಯು ಸ್ವತಃ ಸತ್ಯ ಅಹಿಂಸಾದಿ ಧರ್ಮಗಳಲ್ಲಿ ಸಿದ್ಧಿಯನ್ನು ಪಡೆದುಕೊಳ್ಳಬೇಕಾದರೆ ಸಮಾಜದಲ್ಲಿ ಆಗುತ್ತಿರುವ ಅಧರ್ಮ ವನ್ನು ವಿರೋಧಿಸುವುದು ಅವನ ಕರ್ತವ್ಯ.

೫ ತನ್ನಲ್ಲಿ ಸತ್ಯಾದಿ ಗುಣಗಳು ಎಷ್ಟು ಉತ್ಕರ್ಷಹೊಂದಿರುವವೋ, ಅಧ-ರ್ಮದ ವಿಷಯವಾಗಿ ಎಷ್ಟು ಸ್ಪಷ್ಟವಾದ ಕಟು ಅನುಭವವು ಉಂಟಾಗಿರು ವುದೋ, ಆ ಮಟ್ಟಿಗೆ ಸಮಾಜದೊಳಗಿನ ಅಧರ್ಮವನ್ನು ವಿರೋಧಿಸುವ ತನ್ನ ಕರ್ತವ್ಯವು ಅವನಿಗೆ ತಿಳಿಯುವುದು, ಆ ಕರ್ತವ್ಯಪಾಲನೆಗಾಗಿ ಅವನು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸುವನು.

## ೨ ಸತ್ಯಾಗ್ರಹಿಯ ಕಾರ್ಯಮರ್ಯಾದೆ

೧ ಸತ್ಯಾಗ್ರಹವು ಇನ್ನೂ ಚನ್ನಾಗಿ ಸಂಶೋಧಿತವಾದ ಸಂಪೂರ್ಣ ಶಾಸ್ತ್ರ ವಾಗಿಲ್ಲ. ಇದರ ಪ್ರಯೋಗವು ಇನ್ನೂ ಅಷ್ಟು ಮುಂದುವರಿದಿಲ್ಲ, ಬಾಲ್ಯಾ ವಸ್ಥೆಯಲ್ಲೇ ಇದೆ. ಇದರ ಪ್ರಯೋಗ ಮಾಡುವಂತಹ, ಇದರ ಪೂರ್ಣ ಶಕ್ತಿ ಯನ್ನು ಕಂಡುಹಿಡಿದಂತಹ, ಮತ್ತು ಇದನ್ನು ಎಲ್ಲೆಲ್ಲಿಯೂ ಒರೆಗೆ ಹಚ್ಚು ವಂತಹ ಒಬ್ಬನಾದರೂ ಪಂಡಿತನು ಈ ವರೆಗೆ ಕಂಡುಬಂದಿಲ್ಲ.

೨ ಆದುದರಿಂದ ಸರ್ವಪ್ರಕಾರದ ಅಧರ್ಮ, ಅನ್ಯಾಯ, ಕಲಹ ಮುಂತಾ ದುವುಗಳನ್ನು ಕೂಡಲೇ ದೂರೀಕರಿಸಲು ಬರುವಂತಹ, ಈ ಕ್ಷಣಕ್ಕೆ ರೂಢಿಗೆ ತರಲು ಬರುವಂತಹ ಒಂದು ಅಹಿಂಸಾಮಾರ್ಗವು ಈಗಲೇ ಸಿಕ್ಕೀತೆಂದು ನಾವು ಆಶಿಸಬಾರದು. ಆದರೆ ಸತ್ಯದಲ್ಲೂ ಅಹಿಂಸೆಯಲ್ಲೂ ಇಂತಹದೊಂದು ಶಕ್ತಿಯುಂಟೆಂಬ ವಿಶ್ವಾಸವನ್ನೂ ಶ್ರದ್ಧೆಯನ್ನೂ ಇಟ್ಟು ಸತ್ಯಾಗ್ರಹಿಯು ಆ ಮಾರ್ಗವನ್ನು ಹುಡುಕಲು ಯತ್ನಿಸುತ್ತಿರಬೇಕು.

೩ ಆದರೆ ಈ ಅವಧಿಯಲ್ಲಿ ಇದರಿಂದ ಅನ್ಯಾಯ, ಅಧರ್ಮ, ಮತ್ತು ಕಲಹಗಳು ಕೂಡಲೆ ದೂರವಾಗದಿರುವುದನ್ನು ಕಂಡು ಸತ್ಯಾಗ್ರಹಿ ನಿರುತ್ಸಾಹಿ ಯಾಗಬಾರದು; ಕಿಂಕರ್ತವ್ಯಮೂಢನಾಗಿ ಕ್ರಿಯಾಶೂನ್ಯನೂ ಆಗಬಾರದು.

೪ ಅಧರ್ಮವನ್ನು ನಾಶಪಡಿಸುವುದಕ್ಕಾಗಿ ಸತ್ಯಾಗ್ರಹದ ಮಾರ್ಗವನ್ನು ಶೋಧಿಸಲಾರದವರು ಹಿಂಸಾತ್ಮಕ ಉಪಾಯಗಳನ್ನು ಕೈಕೊಳ್ಳಬಹುದು. ಸತ್ಯಾಗ್ರಹಿಯು ಅವನ್ನು ನಿಷೇಧಿಸಬೇಕು ಮಾತ್ರ. ಇಲ್ಲವೆ ಆರ್ಥಿಕ ಮತ್ತು ಶಾರೀರಿಕ ಸಹಾಯ ಮಾಡದೆ ತಟಸ್ಥನಾಗಿರಬೇಕು. ಆದರೆ ಇಷ್ಟರಿಂದಲೇ ಹಿಂಸೆಯ ಬಗ್ಗೆ ಇದ್ದ ಇವನ ನೈತಿಕ ಹೊಣೆಯು ಕಡಮೆಯಾಗುವುದಿಲ್ಲ. ಅಧರ್ಮಗಳನ್ನು ನಾಶಮಾಡಲು ಅಹಿಂಸಾತ್ಮಕ ಉಪಾಯಗಳನ್ನು ಹೇಳಿ, ಅವುಗಳಂತೆ ತಾನು ನಡೆದು, ಇವುಗಳಿಂದಲೇ ಅಧರ್ಮವು ದೂರವಾಗುವುದೆಂದು ಸಿದ್ಧಮಾಡಿ ತೋರಿಸಬೇಕು. ಎಂದರೆ ಮಾತ್ರ ಅವನು ಹೊಣೆಯಿಂದ ಮುಕ್ತನಾಗುವನು.

೫ ಇದರಿಂದ ಸತ್ಯಾಗ್ರಹಿಯು ಬರಿಯ ತಟಸ್ಥನಿರುವುದೂ ನಿಷೇಧಿಸುವುದೂ ಯಾವಾಗಲೂ ತಪ್ಪೇ ಎನ್ನಲಾಗುವುದಿಲ್ಲ. ಆದರೆ ಎಷ್ಟೋ ಸಲ ಇಷ್ಟೇ ಮಾಡಬೇಕಾಗುವುದು, ಮತ್ತು ಇಷ್ಟೇ ಮಾಡುವುದು ಕರ್ತವ್ಯವಾಗುವುದು.

೬ ಸತ್ಯಾಗ್ರಹಿಯು ಹಿಂಸೆಯಲ್ಲಿ ಅಲ್ಪ-ಸ್ವಲ್ಪ ಸೇರಿಕೊಳ್ಳಬೇಕಾಗುವ ಎಷ್ಟೋ ಸಂದರ್ಭಗಳು ಒದಗುವವು. ಉದಾಹರಣೆಗೆ: ಅಪರಾಧಿಗೆ ಶಿಕ್ಷೆ ವಿಧಿಸುವುದು; ಯುದ್ಧವು ಹೊಡಿದಾಗ ತನ್ನ ದೇಶಕ್ಕೆ ಸಹಾಯ ಮಾಡುವುದು; ತಾನು ಯಾವ ರಾಜ್ಯದಲ್ಲಿ ಇರುವನೊ, ಯಾವ ರಾಜ್ಯದಲ್ಲಿ ಸಂರಕ್ಷಿಸಲ್ಪಡುತ್ತಿರುವನೊ, ಆ ರಾಜ್ಯಕ್ಕೆ ಅಹಿಂಸಾಮಯವಾದ ಮಾರ್ಗಗಳನ್ನು ತೋರಿಸಲು ಅಸಮರ್ಥನಾಗಿ ಕೇವಲ ಹಿಂಸೆಯನ್ನು ನಿಷೇಧಿಸಿದರೆ, ಮತ್ತು ಅಸಹಕಾರವನ್ನು ಮಾಡಿದರೆ, ಅವನು ಹಿಂಸೆಯಲ್ಲಿ ಪಾಲುಗಾರನಾಗಲಿಲ್ಲವೆಂದು ಎಣಿಸಲಾಗದು.

೭ ಆದರೆ ಹೀಗೆ ಹಿಂಸೆಗೆ ಸಹಾಯ ಮಾಡುತ್ತಿರುವಾಗ ಇವನು ತನ್ನಲ್ಲಿರುವ ಸತ್ಯ-ನಿಷ್ಠೆಯನ್ನೂ ಅಹಿಂಸಾವೃತ್ತಿಯನ್ನೂ ತೋರಿಸಬೇಕು, ಅಹಿಂಸಾತ್ಮಕ ಮಾರ್ಗಗಳನ್ನು ಹುಡುಕಲು ಯತ್ನಿಸಬೇಕು.

## ೩ ಸತ್ಯಾಗ್ರಹದ ಮೂಲ ಸಿದ್ಧಾಂತಗಳು

೧ ಮನುಷ್ಯನು ಎಷ್ಟೇ ಸ್ವಾರ್ಥಿಯಾಗಿದ್ದರೂ, ಸ್ವಾರ್ಥಸಾಧನೆಗಾಗಿ ಮನಬಂದ ಕುಟಿಲ ಉಪಾಯಗಳನ್ನು ಮಾಡಲು ಸಿದ್ಧನಿದ್ದರೂ, ತನ್ನ ಅಂತರಾಳದಲ್ಲಿ ಸತ್ಯವೆಂಬ ಒಂದು ವಸ್ತುವಿದೆ ಎಂಬ ಅರಿವು ಅವನಿಗೆ ಇರುವುದು. ಅವ

ನಿಗೆ ಆದರ ವಿಷಯದಲ್ಲಿ ಆದರವೂ ಭಯವೂ ಇದ್ದೇ ಇರುವುದು. ಮನುಷ್ಯ-ಜಾತಿಯ ಹೃದಯದಲ್ಲಿರುವ ಈ ಗುಪ್ತಶ್ರದ್ಧೆ, ಆದರ, ಮತ್ತು ಭಯವೇ ಸತ್ಯಾಗ್ರಹಶಾಸ್ತ್ರದ ಅಡಿಗಲ್ಲು. ಮಾನವನ ಹೃದಯದಲ್ಲಿದ್ದ 'ಅಂತಃಕರಣದ ಧ್ವನಿ' ಎಂಬುದು ಇದೇ

೨ ಸ್ವಾರ್ಥಕ್ಕೆ ಬಲಿಯಾದ ಮನುಷ್ಯನು ಆದಷ್ಟು ಹೆಚ್ಚು ಹೊತ್ತು ಈ ಅಂತಃಕರಣದ ಧ್ವನಿಯನ್ನು ದುರ್ಲಕ್ಷಿಸಲು, ಇಲ್ಲವೆ ಮೆಟ್ಟಲು ಪ್ರಯತ್ನಿಸುವನು. ಇಂಥವನನ್ನು ವಿರೋಧಿಸುವವನು ನಿಜವಾದ ಸತ್ಯಾಗ್ರಹಿಯಾಗಿದ್ದರೆ ಆ ಸ್ವಾರ್ಥಿಯು ಈ ಧ್ವನಿಗೆ ಕಿವಿಗೊಡದೆ ಇರಲಾರನು.

೩ ಈ ಧ್ವನಿಯು ಅವನೆದುರು ಅನೇಕ ರೂಪಗಳಲ್ಲಿ ನಿಲ್ಲುವುದು. ಅವನಿಗೆ ತನ್ನ ಅನ್ಯಾಯದ ಮನವರಿಕೆಯಾಗಿ ತನ್ನ ಈ ಸ್ವಾರ್ಥಕ್ಕಾಗಿ ಅವನಿಗೆ ಪಶ್ಚಾತ್ತಾಪವಾಗುವುದು. ಇದು ಈ ಧ್ವನಿಯ ಶ್ರೇಷ್ಠ ಪ್ರಕಾರವು. 'ಹೃದಯ ಪಲ್ಲಟ'ವೆಂದು ನಾವು ಯಾವುದಕ್ಕೆ ಎನ್ನುತ್ತೇವೋ ಅದೇ ಇದು.

೪ ಆದರೆ ಈ ಧ್ವನಿ ಇದಕ್ಕೂ ಮೆಲ್ಲಗೆ ಕೂಡ ಕೇಳುವುದು-ಲೋಕ ಲಜ್ಜೆಯ ರೂಪದಲ್ಲಿ, ಇಲ್ಲವೆ ಸರ್ವನಾಶವಾಗುವುದೆಂಬ ಭಯದ ರೂಪದಲ್ಲಿ.

೫ ಸತ್ಯಾಗ್ರಹಿಯನ್ನು ಒಂದೆರಡು ವ್ಯಕ್ತಿಗಳು ವಿರೋಧಿಸದೆ ಒಂದು ಸಮಾಜ, ಒಂದು ಜಾತಿ, ಇಲ್ಲವೆ ಒಂದು ತಂತ್ರವು ವಿರೋಧಿಸುವಾಗ ಈ ತರದ ಅಂತರ್ನಾದವು ಅವರೊಳಗಿನ ಹೆಚ್ಚು ಶುದ್ಧ ಚರಿತ್ರೆಯುಳ್ಳವನಿಗೆ ಮೊದಲು ಕೇಳಿಬರುವುದು. ಮೊದಲು ಅವನ ಹೃದಯಪಲ್ಲಟವಾಗುವುದು. ಬಳಿಕ ಅವನು ಅದನ್ನು ತನ್ನ ಜನರಿಗೆ ಕೇಳಿಸುವನು, ಮತ್ತು ಸತ್ಯದ ಪಕ್ಷವನ್ನು ಹಿಡಿದು ವಿರೋಧಿಸುವನು.

೬ 'ಅಂತಃಕರಣದ ಧ್ವನಿ'ಯನ್ನು ಕೇಳುವಂತೆ ವಿರೋಧಿಯ ಹೃದಯವನ್ನು ಎಚ್ಚರಿಸುವುದೇ ಪ್ರತಿಯೊಂದು ಸತ್ಯಾಗ್ರಹದ ಗುರಿ. ವಿರೋಧಿಯ ಹೃದಯವು ಒಮ್ಮೆ ಎಚ್ಚತ್ತಿತೆಂದರೆ, ಮುಂದೆ ಅನ್ಯಾಯದ ಪರಿಮಾರ್ಜನವೆಂದು, ತಾನು ಮಾಡತಕ್ಕದ್ದೆಲ್ಲ ಅವನಿಂದ ಸ್ವಾಭಾವಿಕವಾಗಿಯೇ ಮುಖ್ಯ ಸಾಧ್ಯದ ಫಲಶ್ರುತಿ ಎಂದು ಆಗುವುದು.

## ೪ ಸತ್ಯಾಗ್ರಹದ ಸಾಮಾನ್ಯ ಲಕ್ಷಣಗಳು

೧ ಅಧರ್ಮವನ್ನು ಸತ್ಯ-ಅಹಿಂಸಾದಿ ಸಾಧನಗಳಿಂದಲೇ ವಿರೋಧಿಸ

ಬೇಕೆಂಬ ನಿಯಮವು ಸಾರ್ವತ್ರಿಕವಾದುದು.

೨ ಅಧರ್ಮವನ್ನು ನಾಶ ಮಾಡುವ ಧರ್ಮಯುಕ್ತ ಉಪಾಯಗಳು ಇದ್ದೇ ಇವೆ ಎಂಬ ಶ್ರದ್ಧೆಯಿಂದಲೂ ಕಳಕಳಿಯಿಂದಲೂ ಯೋಚಿಸುವ ಸತ್ಯಾಗ್ರಹಿಗೆ ಆ ದಾರಿಗಳು ಹೊಳೆದೇ ಹೊಳೆಯುವವು.

೩ ಸತ್ಯಾಗ್ರಹ-ಧರ್ಮವನ್ನು ಆಚರಿಸುವಾಗ ಸತ್ಯಾಗ್ರಹಿಯೇ ಕಷ್ಟ ಸಹಿಸ ಬೇಕಾಗುವುದು. ವಿರೋಧೀ ಪಕ್ಷಕ್ಕೆ ದುಃಖ ಕೊಡಬೇಕೆಂಬ ಉದ್ದೇಶವು ಇದರಲ್ಲಿ ಇರುವುದೇ ಇಲ್ಲ. ಆದುದರಿಂದ ತಾನು ತಪ್ಪು ಮಾಡಿದರೆ ಸತ್ಯಾಗ್ರಹಿಯು ಅವಶ್ಯವಿದ್ದುದಕಿಂತ ಹೆಚ್ಚು ದುಃಖವನ್ನು ಅನುಭವಿಸಬೇಕಾಗ ಬಹುದು.

೪ ಆದರೆ ಸತ್ಯಾಗ್ರಹದಿಂದ ವಿರೋಧಿಯೊಡನೆ ದ್ವೇಷವು ಬೆಳೆಯುವ ಬದಲು ಕಡಮೆಯಾಗುವುದು. ಸತ್ಯಾಗ್ರಹದ ಕೊನೆಯಲ್ಲಿ ಎರಡೂ ಪಕ್ಷ ಗಳು ಒಂದಾಗಿ ಗೆಳೆತನವು ಬೆಳೆಯುವುದು.

೫ ಅಧರ್ಮವನ್ನು ವಿರೋಧಿಸಲು ಸತ್ಯಾಗ್ರಹದ ಯೋಗ್ಯ ಮಾರ್ಗಗಳು ಹೊಳೆಯುವ ವರೆಗೆ ಸತ್ಯಾಗ್ರಹಿಯು ಯಾವ ತರದಿಂದಲೂ ಮುಂದಡಿ ಇಡಲು ಆತುರನಾಗಬಾರದು. ಶಾಂತಿಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತ ಜನರ ಸೇವೆ ಮಾಡುತ್ತಿರಬೇಕು. ಈ ರೀತಿಯಿಂದ ಇರುವಾಗ ಒಂದು ದಿನ ತನಗೆ ಸ್ಪಷ್ಟವಾದ ದಾರಿ ಹೊಳೆಯುವುದೆಂಬ, ಅದನ್ನು ಕಾರ್ಯರಂಗದಲ್ಲಿ ತರುವ ಬಲವೂ ತನಗೆ ದೊರಕುವುದೆಂಬ, ಇಲ್ಲವೆ ಪರಮಾತ್ಮನೇ ತನ್ನ ತರತರದ ಶಕ್ತಿಗಳಿಂದ ಆ ಅಧರ್ಮವನ್ನು ನಷ್ಟಪಡಿಸುವನೆಂಬ ನಂಬಿಗೆ, ಶ್ರದ್ಧೆ ಇರಬೇಕು.

೬ ಸತ್ಯಾಗ್ರಹದ ಶಸ್ತ್ರವು ಸಂಘ-ಬಲವನ್ನು ಅವಲಂಬಿಸಿಲ್ಲ. ಆದರೆ ಸಂಘ-ಬಲದಿಂದ ಇದರ ಶಕ್ತಿ ಬೆಳೆಯಬಹುದು. ನಿಜವಾದ ಸತ್ಯಾಗ್ರಹ ಮತ್ತು ಸುಳ್ಳು ಸತ್ಯಾಗ್ರಹ, ಇವುಗಳೊಳಗಿನ ಭೇದವನ್ನು ಪರೀಕ್ಷಿಸುವ ಬೀಗದ ಕೈ ಇದೊಂದು. ಸತ್ಯಾಗ್ರಹದ ಸೂಚನೆ ಕೊಡುವವನು, ತಾನು ಒಬ್ಬನೇ ಆಗಿ ಅದನ್ನು ಆಚರಿಸಲು ಸಿದ್ಧನಿರದಿದ್ದರೆ ಅವನು ನಿಜವಾದ ಸತ್ಯಾಗ್ರಹಿಯಲ್ಲ; ನಿಜವಾದ ಸತ್ಯಾಗ್ರಹಿ ತನಗೆ ಸ್ಪಷ್ಟವಾಗಿ ತೋರಿದ ಮಾರ್ಗವನ್ನು ಹಿಡಿಯಲು ತಾನು ಒಬ್ಬನೇ ಆದರೂ ಸಿದ್ಧನಿರುವನು.

೭ ತಾನೊಬ್ಬನೇ ಆದರೂ ಸತ್ಯಾಗ್ರಹಕ್ಕೆ ಸಿದ್ಧನಿರುವವನು ಯಾವಾ ಗಲೂ ಯೋಗ್ಯ ಮಾರ್ಗವನ್ನೇ ಹಿಡಿಯುವನೆಂದು ಹೇಳಲಾಗುವುದಿಲ್ಲ. ತಪ್ಪು

ಮಾಡಿದರೆ ಮೂರನೇ ಸೂತ್ರದಲ್ಲಿ ಹೇಳಿದಂತೆ ಅವನು ದುಃಖವನ್ನು ಅನುಭವಿಸಬೇಕಾಗುವುದು.

೮ ಸತ್ಯಾಗ್ರಹಿಯು ಒಣ ಪ್ರತಿಷ್ಠೆಯ ಕಡೆಗೆ ಗಮನಕೊಡುವುದಿಲ್ಲ. ತನ್ನ ವಿಚಾರ-ಸರಣಿಯಲ್ಲಾಗಲಿ ಯೋಚನೆಯಲ್ಲಾಗಲಿ ತಪ್ಪಿದೆ ಎಂದು ತಿಳಿದ ಕೂಡಲೇ, ತಾನು ಎಷ್ಟೇ ಮುಂದುವರಿದಿದ್ದರೂ ಅಲ್ಲಿಯೇ ನಿಂತುಬಿಡುವನು, ಇಲ್ಲವೆ ಹಿಂದೆ ಸರಿಯುವನು. ತಪ್ಪುಗಳನ್ನು ಒಪ್ಪಿಕೊಳ್ಳಲೂ, ಹಾನಿಯನ್ನು ಸಹಿಸಲೂ, ಅವಕ್ಕಾಗಿ ಪ್ರಾಯಶ್ಚಿತ್ತವನ್ನು ಪಡೆಯಲೂ, ಅವನು ನಾಚುವುದಿಲ್ಲ ಏಕೆಂದರೆ ಸತ್ಯದಿಂದ ಭಿನ್ನವಾದ ಯಾವ ವಿಚಾರವೇ ಆಗಲಿ, ಯಾವ ಕಾರಣವೇ ಆಗಲಿ, ಅದು ಸತ್ಯಕ್ಕಿಂತ ಕಡಮೆ ಮಹತ್ವದ್ದೆಂದು ಅವನು ತಿಳಿಯುವನು. ಇದರಿಂದ ಅವನ ಇಷ್ಟಕಾರ್ಯವು ಕೆಡುವುದರ ಬದಲು ಸುಧಾರಿಸುವುದು ಅವನು ನಿಜವಾಗಿಯೂ ಸರಿದುದು 'ಹಿಂದೆ' ಅಲ್ಲ, 'ಮುಂದೆ' ಎಂದು ಆ ಮೇಲೆ ಗೊತ್ತಾಗುವುದು.

## ೫ ಸತ್ಯಾಗ್ರಹದ ಸಂದರ್ಭಗಳು

ಕೆಳಗಿನ ನಿಯಮಗಳು ಮಾರ್ಗದರ್ಶಕವೆಂದು ಮಾತ್ರ ತಿಳಿಯಬೇಕು.

೧ ಸತ್ಯಾಗ್ರಹಿ, ತನ್ನ ಮೇಲೆ ಆದ ವ್ಯಕ್ತಿಗತ ಅನ್ಯಾಯಗಳ ವಿರುದ್ಧವಾಗಿ ಕೂಡಲೇ ಸತ್ಯಾಗ್ರಹ ಹೂಡಲಾಗದು. ಅವನು ತನಗಾದ ಅನ್ಯಾಯಗಳನ್ನು ಸಹಿಸಿಕೊಂಡು ವಿರೋಧಿಯನ್ನು ಪ್ರೇಮದಿಂದ ಗೆಲ್ಲಲು ಪ್ರಯತ್ನಿಸುವನು. ತನಗಾಗುತ್ತಿರುವ ಅನ್ಯಾಯಗಳಲ್ಲಿ ಸ್ವಲ್ಪವಾದರೂ ಸಾಮಾಜಿಕ ಅಹಿತವಿದ್ದುದು ಕಂಡುಬಂದರೆ ಮಾತ್ರ ಅವನ್ನು ಸತ್ಯಾಗ್ರಹದ ಮೂಲಕ ವಿರೋಧಿಸುವನು.

೨ ಇದೇ ರೀತಿಯಾಗಿ ವ್ಯಕ್ತಿಯಿಂದ ಆಗುವ ಅನ್ಯಾಯ, ಮತ್ತು ಸಮಾಜ ಇಲ್ಲವೆ ಸತ್ತಾಧಾರಿಗಳಿಂದ ಆಗುವ ಅನ್ಯಾಯ, ಇವುಗಳಲ್ಲಿ ಸತ್ಯಾಗ್ರಹಿಯು ತಾರತಮ್ಯವನ್ನು ಮಾಡಬೇಕಾಗುವುದು. ಬಲಿಷ್ಠ ವ್ಯಕ್ತಿಯು ನಿರ್ಬಲ ವ್ಯಕ್ತಿಯನ್ನು ಪೀಡಿಸುವುದು ಅಪೂರ್ಣವಾದ ಈ ಮಾನವ-ಸಮಾಜದಲ್ಲಿ ಇದ್ದೇ ಇದೆ. ಈ ತರದ ಎಲ್ಲ ಜಗಳಗಳಲ್ಲಿ ಬೀಳುವುದು ಸತ್ಯಾಗ್ರಹಿಗೆ ಅಶಕ್ಯ. ಇಲ್ಲಿ ಅವನು ತನ್ನ ಶಕ್ತಿ ಎಷ್ಟು, ತನ್ನ ಸೀಮೆ ಎಷ್ಟು, ಅನ್ಯಾಯವು ಯಾವ ತರದ್ದು, ಅದರ ತಾತ್ಕಾಲಿಕ ಮಹತ್ವವೆಷ್ಟು, ನ್ಯಾಯವನ್ನು ಸಂಪಾದಿಸುವ

ಸಾಮಾನ್ಯವಾದ ಮತ್ತು ಕಟ್ಟಳೆಬದ್ಧ ಮಾರ್ಗಗಳು ಯಾವುವು, ಮುಂತಾದ ವಿಷಯಗಳನ್ನು ಕುರಿತು ಯೋಚಿಸಬೇಕಾಗುವುದು. ಎಲ್ಲಿ ಸ್ಪಷ್ಟವಾಗಿ ಅನ್ಯಾಯವಾಗುವುದೆಂದು ಎನಿಸುವುದೋ, ಅಲ್ಲಿ ಅವನು ತನ್ನ ಪ್ರಾಣವನ್ನು ಈಡಾಡಿಯಾದರೂ ಅದನ್ನು ತಡೆಯಲು ಯತ್ನಿಸುವನು.

೩. ಸಾಮಾಜಿಕ ಹಾಗೂ ರಾಜಕೀಯ ಅನ್ಯಾಯಗಳಲ್ಲಿಯೂ ತಾರತಮ್ಯವನ್ನು ಮಾಡಬೇಕಾಗುವುದು. ಒಂದು ಅಧರ್ಮವು, ಅನ್ಯಾಯವು ಇಂತಹದಿದೆ: ಅದರಲ್ಲಿ ಅಧರ್ಮದ ಅಥವಾ ಅನ್ಯಾಯದ ಕಟ್ಟಳೆ ಇರುವುದಿಲ್ಲ. ಆದರೆ ಅದರ ಬಳಿಕೆ ಅಧರ್ಮದಿಂದ, ಇಲ್ಲವೆ ಅನ್ಯಾಯದಿಂದ ಆಗುವುದು; ಅದನ್ನು ಬಳಿಕೆಗೆ ತರುವವನು ತನ್ನ ಅನ್ಯಾಯವನ್ನು ಕಟ್ಟಳೆಯ ಹಿಂದೆ ಬಚ್ಚಿಡುವನು. ಇಲ್ಲವೆ ಕ್ಯಾದೆಯನ್ನೇ ತನ್ನ ಶಸ್ತ್ರವನ್ನಾಗಿ ಮಾಡಿಕೊಳ್ಳುವನು. ಅವನು ಇದರಲ್ಲಿ ತನ್ನ ನ್ಯಾಯದ ಬಗ್ಗೆ, ಧರ್ಮದ ಬಗ್ಗೆ, ದಂಭವನ್ನು ತಾಳಬೇಕಾಗುವುದು. ಮಾನವ-ಸಮಾಜದಲ್ಲಿ ಇದೂ ಜರಗತಕ್ಕದ್ದೇ. ಮಾನವ-ಸಮಾಜದಲ್ಲಿ ಸದ್ಗುಣಗಳು, ಸಮಭಾವನೆ ಬೆಳೆಯುತ್ತ ಹೋದಂತೆ ಈ ತರದ ಸ್ಥಿತಿ ಸುಧಾರಿಸುತ್ತ ಹೋಗುವುದು. ಇಲ್ಲಿಯೂ ತಾನು ಮಾಡುವುದು ನ್ಯಾಯ, ಧರ್ಮ, ಎಂದು ಹೇಳಿ ಧರ್ಮದ, ನ್ಯಾಯದ ಮುಸುಕು ಹಾಕಿಕೊಂಡಿದ್ದರೆ, ಇದು ದಂಭಾಚಾರಿಯು ಸತ್ಯಕ್ಕೆ ಅರ್ಪಿಸಿದ ಶ್ರದ್ಧಾಂಜಲಿ ಎಂದು ಬಗೆದು ಸಮಾಧಾನಪಡಬೇಕಾಗುವುದು. ಈ ತರದ ದಂಭಾಚಾರವು ಎಲ್ಲ ಕಡೆಗೂ ಕಂಡುಬರಲಾರಂಭಿಸಿದರೆ ಸತ್ಯಾಗ್ರಹವನ್ನು ಹೂಡುವ ಪ್ರಸಂಗವು ಬರುವುದು. ಆಗ ಅದರ ಮಾರ್ಗಗಳೂ ಹೊಳೆಯುವವು. ಉದಾಹರಣೆಗೆ: ಎಲ್ಲ ಕಡೆಯಲ್ಲೂ ದಬ್ಬಾಳಿಕೆ ನಡೆಯುತ್ತಿರುವಾಗ ಸತ್ಯಾಗ್ರಹಿಯು ತನ್ನ ರಕ್ಷಣೆ ಮಾಡಿಕೊಳ್ಳದೆ ಶಿಕ್ಷೆಯನ್ನು ಸಹಿಸಿಕೊಳ್ಳಬೇಕಾಗುವುದು. ಇದು ಸತ್ಯಾಗ್ರಹದ ಸ್ವತಂತ್ರವಾದ ಒಂದು ರೀತಿಯಾಗಬಹುದು.

೪ 'ಬೇಕಾದುದನ್ನು ಮಾಡಿರಿ, ನಾವು ಮಾಡಿಯೆ ಮಾಡುವೆವು' ಎಂಬ ನಿರ್ಲಜ್ಜ ಭಾವನೆಯಿಂದ ನಡೆಯುವ ಅನ್ಯಾಯವನ್ನೂ ನ್ಯಾಯದ ಹೆಸರಿನಿಂದ ನಡೆಯುತ್ತಿರುವ ಅಧರ್ಮ ಅನ್ಯಾಯಗಳನ್ನೂ ಸತ್ಯಾಗ್ರಹ-ಶಸ್ತ್ರದಿಂದ ವಿರೋಧಿಸುವುದು ಕರ್ತವ್ಯಕರ್ಮ. ಏಕೆಂದರೆ ಇಂಥ ಅನ್ಯಾಯವನ್ನು, ಅಧರ್ಮವನ್ನು ಸಹಿಸುವವನ ಸತ್ವಹಾನಿಯಾಗುತ್ತದೆ.

## ೬ ಸತ್ಯಾಗ್ರಹದ ಪ್ರಕಾರಗಳು

೧ ಸತ್ಯಾಗ್ರಹವು ಎಷ್ಟು ರೀತಿಯಿಂದ ಆಗಬಲ್ಲುದೆಂಬುದನ್ನು ಸಮಗ್ರವಾಗಿ ಹೇಳಲಾಗುವುದಿಲ್ಲ. ಅಧರ್ಮದ ಸ್ವರೂಪ, ಅದರ ತೀವ್ರತೆ, ಅದನ್ನು ಆಚರಿಸತಕ್ಕ ವ್ಯಕ್ತಿಯ ಮತ್ತು ಸಮಾಜದ ವಿಶೇಷತೆಗಳು, ಸಮಾಜದ ಮತ್ತು ತನ್ನ ನಡುವೆ ಇರುವ ಸಂಬಂಧ, ತನ್ನ ಹಾಗೂ ತನ್ನ ಪಕ್ಷದವರ ಜೀವನದೊಳಗಿಂದ ಅಧರ್ಮವನ್ನು ತಳ್ಳಿಹಾಕುವುದರಲ್ಲಿ ದೊರೆತ ಸಿದ್ಧಿ, ಈ ಎಲ್ಲ ವಿಷಯಗಳನ್ನು ಸತ್ಯಾಗ್ರಹದ ಪದ್ಧತಿ, ಪ್ರಕಾರ, ಮತ್ತು ಪ್ರಮಾಣವು ಅವಲಂಬಿಸಿರುವುದು.

೨ ಒಂದು ಕುಟುಂಬದ ಒಂದು ವ್ಯಕ್ತಿಯು, ಅಧರ್ಮದಿಂದ ನಡೆಯುವಂಥ ಅದೇ ಕುಟುಂಬದ ಇನ್ನೊಬ್ಬ ವ್ಯಕ್ತಿಯ ವಿರುದ್ಧ ಯಾವ ಸತ್ಯಾಗ್ರಹದ ಪದ್ಧತಿಯನ್ನು ಅನುಸರಿಸಬಲ್ಲನೋ, ಹೆಚ್ಚು-ಕಡಿಮೆಯಾಗಿ ಅದೇ ಪದ್ಧತಿಯನ್ನು ಸಮಾಜದಲ್ಲಿಯೂ ಅನುಸರಿಸುವುದು ಸಾಧ್ಯವೆಂದು ಸಾಮಾನ್ಯವಾಗಿ ಹೇಳಬಹುದು.

೩ ಈ ರೀತಿ, ತಿಳಿಹೇಳುವಿಕೆಯಿಂದ ಮೊದಲುಮಾಡಿ ಉಪವಾಸ, ಅಸಹಕಾರ, ಸವಿನಯಭಂಗ, ಕುಟುಂಬ-ಸಮಾಜ-ರಾಜ್ಯ ಮುಂತಾದುವುಗಳ ತ್ಯಾಗ, ತನ್ನ ಜನ್ಮಸಿದ್ಧವಾದ ಅಧಿಕಾರಗಳನ್ನು ಶಾಂತ ರೀತಿಯಿಂದ ನಡೆಸುವುದು, ಈ ಎಲ್ಲ ಕಾರ್ಯಗಳನ್ನು ಮಾಡುತ್ತಿರುವಾಗ ಬಂದ ಸಂಕಟಗಳನ್ನು ಸಹಿಸುವುದು, ಹೀಗೆ ಬೇರೆ ಬೇರೆ ಎಷ್ಟೋ ಪ್ರಕಾರಗಳು ಇರುವವು.

೪ ಇವುಗಳೊಳಗಿಂದ ವಿವೇಕದಿಂದಲೂ ತಾರತಮ್ಯಬುದ್ಧಿಯಿಂದಲೂ ಯೋಗ್ಯ ಉಪಾಯಗಳನ್ನು ಆಯ್ದು, ಯೋಗ್ಯವಾದ ಪ್ರಮಾಣದಲ್ಲಿ ಆಚರಿಸಬೇಕು. ಇದೆಲ್ಲವೂ ಅನುಭವದಿಂದ ತಿಳಿಯುವುದು. ಆದರೆ ಕೆಲವು ಉಪಯುಕ್ತ ಸೂಚನೆಗಳನ್ನು ಮುಂದಿನ ಪ್ರಕರಣಗಳಲ್ಲಿ ಕೊಡಲಾಗಿದೆ.

೫ ಸತ್ಯಾಗ್ರಹವು ಆತ್ಮಶಕ್ತಿಯ ಇನ್ನೂ ಅಪೂರ್ಣವಾಗಿ ಪರಿಶೋಧಿಸಲ್ಪಟ್ಟ ಅಸ್ತ್ರವೆಂದು ನಾವು ನೆನಪಿನಲ್ಲಿಡಬೇಕು. ಕಾಯಾ-ವಾಚಾ-ಮನಸಾ ಸತ್ಯವನ್ನೂ ಅಹಿಂಸೆಯನ್ನೂ ಆಚರಿಸುತ್ತ ಅದರ ಶಕ್ತಿಯನ್ನು ಹುಡುಕಲು ಹೆಣಗುವ ತಪಸ್ವಿಗೆ ಅದರ ಅನೇಕ ಪ್ರಕಾರಗಳು ಗೊತ್ತಾಗುವವು; ಅದರ ಅಖಂಡ, ಅನಂತ ಶಕ್ತಿಯ ಅರಿವು ಉಂಟಾಗುವುದು.

೬ ಸತ್ಯಾಗ್ರಹದಲ್ಲಿ ನಿಜವಾಗಿ ಯುದ್ಧವನ್ನು ಕೂಡ ನಿಲ್ಲಿಸುವ ಶಕ್ತಿ ಇರತಕ್ಕದ್ದು. ಈ ಶಕ್ತಿಯ ಬಾಹ್ಯಸ್ವರೂಪವು ಹೇಗಿರಬೇಕೆನ್ನುವುದನ್ನು ಈಗ ಹೇಳಲಾಗುವುದಿಲ್ಲ. ಇದರ ಶಕ್ತಿಯನ್ನು ಶೋಧಿಸಲು ನಾವು ಹೆಚ್ಚು ಶ್ರದ್ಧೆಯಿಂದ ಹೆಣಗಬೇಕೆಂಬುದೇ ಇದರ ಅರ್ಥ.

## ೭ ತಿಳಿಸಿ ಹೇಳುವಿಕೆ

೧ ವಿರೋಧಿಗೆ ತಿಳಿಹೇಳಿ ಸಮಾಧಾನದಿಂದ ಕೆಲಸ ಮಾಡಲೆತ್ನಿಸುವುದು ಸತ್ಯಾಗ್ರಹಿಯ ಮೊದಲನೆಯ ಲಕ್ಷಣ. ಇದು ಸತ್ಯಾಗ್ರಹದ ಮೊದಲ ಮೆಟ್ಟಿಲೂ ಅಹುದು.

೨ ಸತ್ಯಾಗ್ರಹಿಯು ವಿರೋಧಿಗೆ ಸರ್ವವಿಧದಿಂದಲೂ ತಿಳಿಸಿಹೇಳುವನು. ತಿಳಿಹೇಳುವ ಯಾವ ರೀತಿಯನ್ನೂ ಅವನು ಉಳಿಸನು. ತಿಳಿಹೇಳುವಾಗ ಅವನು ಧೈರ್ಯವನ್ನೂ ತಾಳ್ಮೆಯನ್ನೂ ಅತ್ಯಂತ ಉದಾರತನವನ್ನೂ ತೋರಿಸುವನು. ಇದಕ್ಕಾಗಿ ಮಿತ್ರರು ಮಧ್ಯಸ್ಥಿಕೆಗೆ ಬಂದರೆ ತಿರಸ್ಕರಿಸಲಾರನು. ಸಿದ್ಧಾಂತದ ಭಂಗವಾಗದಂತಹ ಯಾವುದೇ ಪ್ರಕಾರದ ಒಡಂಬಡಿಕೆಗೂ ಅವನು ಸಿದ್ಧನಿರುವನು.

೩ ತಿಳಿಹೇಳುವ ಪ್ರಯತ್ನವು ನಿಷ್ಫಲವಾದರೆ, ವಿಶೇಷ ಪ್ರಕಾರದ ಮಾರ್ಗವನ್ನು ಹಿಡಿಯುವ ಸಂದರ್ಭವು ಬಂದರೆ, ಸತ್ಯಾಗ್ರಹಿಯು ತಿರುಗಿ ವಿರೋಧಿಗೆ ಒಂದು ಕೊನೆಯ ಸಂಧಿಯನ್ನು ಕೊಡದೆ ಮುಂದಡಿಯನ್ನಿಡಬಾರದು.

೪ ಮುಂದಡಿಯನ್ನಿಟ್ಟ ಮೇಲೂ ಅವನು ಯಾವಾಗಲೂ ಒಡಂಬಡಿಕೆಗೆ ಸಿದ್ಧನಿರುವನು. ತನಗೆ ಪೀಡೆಯಾಗುವ ಭೀತಿಯಿದ್ದರೂ ಅವನು ಹೆದರದೆ ತನ್ನ ಸಂಧಿ-ಪ್ರೀತಿಯನ್ನೂ, ಕಾರ್ಯವನ್ನು ಪುನಃ ಮೊದಲಿನಿಂದ ಪ್ರಾರಂಭಿಸುವ ಸಿದ್ಧತೆ ತನ್ನಲ್ಲಿದೆ ಎನ್ನುವುದನ್ನೂ ತೋರಿಸುವನು. ಕಾರಣವಿಷ್ಟೆ: ಸತ್ಯಾಗ್ರಹಿ ಅಸಹಕಾರಿಯಾಗಬಹುದು, ವಿರೋಧಿಯಾಗಬಹುದು, ಕಡುತರವಾದ ಕಾಳಗವನ್ನು ಹೂಡಬಹುದು. ಆದರೆ ತನ್ನ ರೋಮ ರೋಮದಲ್ಲಿದ್ದ ಸಹಕಾರದ, ಗೆಳೆತನದ, ಮತ್ತು ಸಂಧಿಯ ಇಚ್ಛೆಯನ್ನು ಬಿಟ್ಟುಬಿಡಲಿಕ್ಕಿಲ್ಲ.

೫ ವಿರೋಧಿಯ ಅಂತಃಕರಣದಲ್ಲಿ ಹೃದಯ-ಪಲ್ಲಟದ ಧ್ವನಿಯು ಏಳುವ ವರೆಗೆ, ಒಂದು ಅನ್ಯಾಯವು ದೂರವಾದ ಮಾತ್ರಕ್ಕೆ ವಿರೋಧಿಯ ಹೃದಯವು ಸ್ವಚ್ಛವಾಯಿತೆಂದೂ ಸತ್ಯಾಗ್ರಹದ ಕಾರ್ಯ ಕೊನೆಗಂಡಿತೆಂದೂ

ಹೇಳಲಾಗುವುದಿಲ್ಲ.

೬ ಆದ್ದರಿಂದ ಹೃದಯಪಲ್ಲಟವಾಗುವ ಮೊದಲಿನ ಸಂಧಿಗಳಲ್ಲಿ ಎಷ್ಟೋ ವಿಷಯಗಳನ್ನು ಬಿಟ್ಟುಬಿಡಬೇಕಾಗುವುದು, ಎಷ್ಟೋ ಅನ್ಯಾಯಗಳನ್ನು ನುಂಗಿಕೊಳ್ಳಬೇಕಾಗುವುದು. ಹೀಗೆ ಮಾಡುವಾಗ ಸತ್ಯಾಗ್ರಹಿಯು ಮೂಲ ಮತ್ತು ಮುಖ್ಯವಾದ ಅನ್ಯಾಯವನ್ನು ದುರ್ಲಕ್ಷಿಸದೆ ಅದನ್ನು ಹೋಗಲಾಡಿಸುವುದಕ್ಕಾಗಿ ಮಾಡುವ ಪ್ರಯತ್ನದಲ್ಲಿ ಕೆಲವೊಂದು ಸಣ್ಣಪುಟ್ಟ ಅನ್ಯಾಯಗಳಾದರೆ ಅತ್ತ ಅಷ್ಟೊಂದು ಗಮನಕೊಡದೆ ತನ್ನ ಉದಾರ ಬುದ್ಧಿಯನ್ನು ತೋರಿಸುವನು.

## ೮ ಉಪವಾಸ

೧ ಉಪವಾಸವು ಸತ್ಯಾಗ್ರಹದ ಒಂದು ರೀತಿ ಎಂದು ತಿಳಿದು ಜನರು ಅದನ್ನು ಆಚರಿಸುವಾಗ ಅತಿ ಅವಸರವನ್ನೂ ತಪ್ಪನ್ನೂ ಮಾಡುವುದುಂಟು.

೨ ಉಪವಾಸದ ಅಸ್ತ್ರವನ್ನು ವ್ಯಕ್ತಿಯ ವಿರುದ್ಧ ಹೂಡಿದ ಸತ್ಯಾಗ್ರಹದಲ್ಲಿ ಎಷ್ಟು ಉಪಯೋಗಿಸಬಹುದೊ ಅಷ್ಟನ್ನು ಸಮಾಜದ ವಿರುದ್ಧವಾಗಲಿ ಒಂದು ತಂತ್ರದ ವಿರುದ್ಧವಾಗಲಿ ಉಪಯೋಗಿಸಲಾಗದು.

೩ ವ್ಯಕ್ತಿಯ ವಿರುದ್ಧವಾಗಿ ಕೂಡ ಉಪವಾಸ-ಸತ್ಯಾಗ್ರಹವನ್ನು ಅನಿರ್ವಾಹವಿದ್ದಾಗ ಅಪರೂಪವಾಗಿ ಹೂಡಬೇಕು. ಉಪವಾಸದಿಂದ ವಿರೋಧಿಯ ನ್ಯಾಯವೃತ್ತಿಯಾಗಲಿ ಧರ್ಮವೃತ್ತಿಯಾಗಲಿ ಜಾಗ್ರತವಾಗಲಿಕ್ಕಿಲ್ಲ; ಆದರೆ ಅವನ ಕೃಪಾವೃತ್ತಿ ಜಾಗ್ರತವಾಗಬಹುದು. ಈ ಪೀಡೆ ತೊಲಗಿದರೆ ಸಾಕೆಂದು ಸತ್ಯಾಗ್ರಹಿಯ 'ಹಟ'ವನ್ನು ವಿರೋಧಿಯು ಪೂರ್ತಿಗೊಳಿಸಬಹುದು. ಸತ್ಯಾಗ್ರಹವು ಇಷ್ಟರಿಂದಲೇ ಸಫಲವಾಯಿತೆಂದು ತಿಳಿಯಲಾಗದು.

೪ ಯಾವುದಾದರೂ ವ್ಯಕ್ತಿಯ ವಿರುದ್ಧ ಉಪವಾಸ-ಸತ್ಯಾಗ್ರಹವನ್ನು ಹೂಡಬೇಕಾದರೆ ಮೊದಲು ಆ ವ್ಯಕ್ತಿಯ ಕೂಡ ಗೆಳೆತನದ ಇಲ್ಲವೆ ಒಂದಿಲ್ಲೊಂದು ರೀತಿಯ ನಿಕಟಸಂಬಂಧವಿರಬೇಕು. ಯಾವ ತರದ ಸಂಬಂಧವೂ ಇರದಿದ್ದರೆ ಉಪವಾಸಮಾರ್ಗವನ್ನು ಅವಲಂಬಿಸುವುದು ಒಳಿತಲ್ಲ.

೫ ಉಪವಾಸ-ಸತ್ಯಾಗ್ರಹವನ್ನು ಕುಟುಂಬದ ಜನರು, ತನ್ನ ಮಿತ್ರರು, ಗುರುಗಳು, ಶಿಷ್ಯರು ಮುಂತಾದ ಪರಿಚಿತರ ವಿರುದ್ಧವಾಗಿಯೆ ಹೂಡಬಹುದು. ಆದರಂತೆ ಸಮಾಜದ ಸೇವೆ ಮಾಡಿ ಸಮಾಜದ ಆದರಕ್ಕೆ ಪಾತ್ರನಾದವನೇ,

ಆ ಸಮಾಜದೊಳಗಿನ ಅನ್ಯಾಯ ಅತ್ಯಾಚಾರಗಳನ್ನು ದೂರಮಾಡುವುದ ಕ್ಕಾಗಿಯೂ ಕೈಕೊಳ್ಳಬಹುದು.

೬ ವ್ಯಕ್ತಿಯ ವಿರುದ್ಧ ಹೂಡಿದ ಸತ್ಯಾಗ್ರಹದಲ್ಲಿ ತನಗೆ ಆಗುವ ಅನ್ಯಾಯಗಳ ಬಗ್ಗೆ ಉಪವಾಸವನ್ನು ಎಂದಿಗೂ ಮಾಡಬಾರದು. ತನ್ನ ಗೆಳೆಯನಾದ ಒಬ್ಬ ವ್ಯಕ್ತಿ ಎರಡನೆಯವರೊಡನೆ, ಇಲ್ಲವೆ ತನ್ನೊಡನೆ, ಕೆಟ್ಟ ರೀತಿಯಿಂದ ವರ್ತಿಸಿದರೆ ಅವನನ್ನು ಹಾದಿಗೆ ತರುವ ಎಲ್ಲ ಉಪಾಯಗಳನ್ನು ಕೈಕೊಂಡರೂ ಅವನ ನಡತೆಯಲ್ಲಿ ಸುಧಾರಣೆಯಾಗದಿದ್ದರೆ ಉಪವಾಸವನ್ನು ಮಾಡಬಹುದು.

೭ ತಂತ್ರದ ವಿರುದ್ಧ ಹೂಡುವ ಸತ್ಯಾಗ್ರಹದಲ್ಲಿ ಉಪವಾಸವು ಕೊನೆಯ ಅಸ್ತ್ರ. ಸತ್ಯಾಗ್ರಹಿಯು ಪರಾಧೀನ-ಸ್ಥಿತಿಯಲ್ಲಿದ್ದಾಗ, ಸತ್ಯಾಗ್ರಹದ ಅನ್ಯ ಅಸ್ತ್ರಗಳನ್ನು ಉಪಯೋಗಿಸುವುದು ಅಶಕ್ಯವಾದಾಗ, ತಂತ್ರದಿಂದ ಆಗುವ ಅಧರ್ಮವನ್ನೂ ಅನ್ಯಾಯವನ್ನೂ ಸಹಿಸುತ್ತ ಜೀವಿಸುವುದರಿಂದ ತನ್ನ ಸತ್ವ ಹಾನಿ ಆಗುವುದೆಂದು ಎನಿಸಿದಾಗ, ಪ್ರಾಣಬಿಡುವ ಸಿದ್ಧತೆಯಿಂದಲೇ ಉಪ ವಾಸವನ್ನು ಪ್ರಾರಂಭಿಸಬೇಕು.

೮ ಇಂತಹ ಸ್ಥಿತಿಯು ಬಂದಿದೆಯೆಂದು ನಿರ್ಣಯಿಸುವಾಗ ಸತ್ಯಾಗ್ರಹಿ ತನ್ನ ಭಾವನೆಗಳನ್ನು ಎಂದಿಗೂ ಪ್ರಕ್ಷುಬ್ಧಗೊಳಿಸುವುದಿಲ್ಲ. ಆದರೆ ತಂತ್ರವನ್ನು ನಡೆಸುವ ವ್ಯವಸ್ಥಾಪಕರ ತೊಂದರೆಗಳ ಬಗ್ಗೆ, ಮತ್ತು ಅವರಲ್ಲಿದ್ದ ಹಳೇ ರೂಢಿಗಳ ಬಲಾಬಲಗಳ ಬಗ್ಗೆ ಯೋಗ್ಯ ವಿಚಾರವನ್ನು ಮಾಡುವನು; ಅವುಗಳಿ ಗಾಗಿ ಬಿಡಬೇಕಾದ ಕೆಲವೊಂದು ಹಕ್ಕುಗಳನ್ನು ಬಿಡಲು ಸಿದ್ಧನಿರುವನು. ಇದಲ್ಲದೆ ಅನಿವಾರ್ಯ ಅನ್ಯಾಯ, ಆಕಸ್ಮಿಕ ಅನ್ಯಾಯ, ಮತ್ತು ತಿಳಿದೂ ತಿಳಿದೂ ಮಾಡಿದ ಅನ್ಯಾಯ, ಅಥವಾ ಅನ್ಯಾಯದ ನಿಯಮಗಳು, ಇವೆಲ್ಲ ಭಿನ್ನ ಭಿನ್ನವೆಂದು ತಿಳಿಯುವನು. ಇವುಗಳಲ್ಲಿ ವಿವೇಕದಿಂದ ವರ್ತಿಸುವನು. ಬಳಿಕ ತನಗಾದ ಅನ್ಯಾಯಗಳನ್ನು ಕಲ್ಲು-ಹೃದಯದಿಂದ ಸಹಿಸಿಕೊಳ್ಳುವನು. ಏಕೆಂದರೆ ಮನುಷ್ಯನು ತಿಳಿದೂ ತಿಳಿದೂ ಅನ್ಯಾಯವನ್ನು ಸಹಿಸಿಕೊಂಡರೆ ಅವನ ಸತ್ವಹಾನಿಯಾಗುವುದಿಲ್ಲ. ಆದರೆ ಅನ್ಯಾಯವನ್ನು ದೈನ್ಯದಿಂದ, ಭಯದಿಂದ, ಅಥವಾ ಜೀವದ ಮೋಹದಿಂದ ಸಹಿಸಿಕೊಂಡರೆ ಸತ್ವಹಾನಿ ಯಾಗುವುದು.

೯ ಇತ್ತ ಉಪವಾಸರೂಪಿ ಸತ್ಯಾಗ್ರಹ ಹೂಡಿ ಅತ್ತ ವಿರೋಧಿ ಪಕ್ಷದ

ಪರಿಷ್ಕರ ಮುಖಾಂತರ ಅನ್ಯಾಯವು ದೂರವಾಗುವಂತೆ ಒತ್ತಾಯ ತರಲು ಯತ್ನಿಸುವುದು ಯೋಗ್ಯವಲ್ಲ. ಇಂಥ ಉಪವಾಸಕ್ಕೆ ಸತ್ಯಾಗ್ರಹವೆಂಬ ಹೆಸರು ಶೋಭಿಸದು.

೧೦ ತಾನಾಗಲಿ ಮಿತ್ರರಾಗಲಿ ಸಂಗಡಿಗರಾಗಲಿ ಮಾಡಿದ ದೋಷಗಳಿಗಾಗಿ ತಪ್ಪುಗಳಿಗಾಗಿ ಪ್ರಾಯಶ್ಚಿತ್ತವೆಂದೂ, ಗೆಳೆಯರನ್ನು ಸಂಗಡಿಗರನ್ನು ಸನ್ಮಾರ್ಗಕ್ಕೆ ಹಚ್ಚುವುದಕ್ಕೆಂದೂ, ಅವರು ಶುದ್ಧ-ದೃಢ ಪ್ರತಿಜ್ಞೆಗೆ ಅಂಟಿಕೊಂಡಿರುವಂತೆ ಮಾಡುವುದಕ್ಕೆಂದೂ ಕೈಕೊಂಡ ಉಪವಾಸ, ಈ ಪ್ರಕರಣದಲ್ಲಿ ಸತ್ಯಾಗ್ರಹವೆನಿಸುವ ಬದಲು ತಪಶ್ಚರ್ಯವೆನಿಸುವುದು. ಜೀವನದಲ್ಲಿ ವಿವೇಕಪೂರ್ಣವಾಗಿ ಮಾಡಿದ ಇಂತಹ ತಪಶ್ಚರ್ಯಕ್ಕೂ ಸ್ಥಾನವುಂಟು. ಆದರೆ ಇಲ್ಲಿ ಇದರ ಚರ್ಚೆ ಅಪ್ರಸ್ತುತ.

## ೯ ಅಸಹಕಾರ

೧ ಎರಡು ಪಕ್ಷಗಳು ಮೊದಲಿಸಿಂದಲೂ ಸಹಕಾರದಿಂದ ನಡೆಯುತ್ತ ಬಂದಿರುವಲ್ಲಿ, ಒಂದು ಪಕ್ಷದ ವ್ಯವಹಾರವು ಎರಡನೆ ಪಕ್ಷದ ಸಹಕಾರದ ಹೊರತು ನಡೆಯದೆ ಇರುವ ಪರಿಸ್ಥಿತಿ ಇದ್ದಲ್ಲಿ ಅಸಹಕಾರ-ಸತ್ಯಾಗ್ರಹವನ್ನು ಹೂಡಬಹುದು.

೨ ತನ್ನ ಸಹಾಯವಿಲ್ಲದೆ ಎರಡನೆ ಪಕ್ಷದ ಕಾರ್ಯವು ನಡೆಯುತ್ತಿದ್ದಲ್ಲಿ ಅಸಹಕಾರಿಯು ಎರಡನೆ ಪಕ್ಷವನ್ನು ಬಿಡಬಹುದು. ಮತ್ತು ತನ್ಮೂಲಕ ಆಗುವ ಸ್ವಂತ ಆತ್ಮ-ಶುದ್ಧಿಯು ಕೂಡ ಅಸಹಕಾರವೆನಿಸುವುದು. ಮತ್ತು ಇದಕ್ಕೂ ಸತ್ಯಾಗ್ರಹದಲ್ಲಿ ಸ್ಥಾನವುಂಟು. ಉದಾಹರಣೆಗೆ: ಅಧರ್ಮಿಯಾದ ಒಬ್ಬ ಸೆಟ್ಟಿಗೆ ಅನೇಕ ಆಳುಗಳು ದೊರೆಯಬಹುದು. ಆದರೆ ಅವನ ಅಧರ್ಮದಲ್ಲಿ ಪಾಲುಗೊಳ್ಳಲು ಇಷ್ಟಪಡದ ಆಳು ತನ್ನ ರಾಜೀನಾಮೆಯನ್ನು ಕೊಡುವನು; ಎರಡನೆಯವರು ಹೆಂಡ ಮಾರಲು ಸಿದ್ಧರಾಗಿದ್ದರೂ ಒಬ್ಬ ಹೆಂಡದವನು ಈ ಉದ್ಯೋಗವನ್ನು ಬಿಟ್ಟುಬಿಡುವನು. ಇಂಥ ಪ್ರಸಂಗಗಳು ಈ ಸೂತ್ರದಲ್ಲಿ ಹೇಳಿದಂತೆ ಅಸಹಕಾರವೆನಿಸುವವು. ಹೀಗೆ ಅಧರ್ಮದಿಂದ ನಡೆದಿರುವ ಕುಟುಂಬಿಗಳನ್ನೂ ಮಿತ್ರರನ್ನೂ ಇನ್ನುಳಿದವರನ್ನೂ ಬಿಟ್ಟುಹೋಗುವುದು ಕೂಡ ಸತ್ಯಾಗ್ರಹವೆನಿಸುವುದು.

೩ ತನ್ನ ಸಹಾಯದ ಹೊರತು ಎರಡನೆ ಪಕ್ಷದ ವ್ಯವಹಾರವು ಅಶಕ್ಯ

ವಿರುವ ಕಡೆಯಲ್ಲಿ ಅಸಹಕಾರವು ಹೆಚ್ಚು ಉಗ್ರವಾದ ಸತ್ಯಾಗ್ರಹವಾಗುವುದು. ಆದ್ದರಿಂದ ಇದನ್ನು ಆರಂಭಿಸುವ ಮೊದಲು ಸತ್ಯಾಗ್ರಹಿಗೆ ತನ್ನ ಮಾರ್ಗವು ಧರ್ಮಯುಕ್ತವಾದದ್ದೆಂದು ಸ್ಪಷ್ಟವಾಗಿ ತೋರಬೇಕು. ಇಲ್ಲಿ ಸತ್ಯಾಗ್ರಹಿಯು, ತನ್ನ ಹೊರತು ಎರಡನೆಯ ಪಕ್ಷದ ವ್ಯವಹಾರವು ನಡೆಯುವುದಿಲ್ಲವೆಂಬುದನ್ನು ಎಂದೂ ಮರೆಯುವುದಿಲ್ಲ. ವಸ್ತುಸ್ಥಿತಿಯು ಹೀಗಿರುವುದರಲ್ಲಿಯೆ ಅವನ ಬಲವಿದೆ. ಇದರಿಂದ ವಿರೋಧಿ ಪಕ್ಷವನ್ನು ಪೀಡಿಸಲು ಆಸ್ಪದ ಸಿಗುವ ಸಂದರ್ಭವೂ ಇದೆ.

೪ ಎರಡನೆ ಪಕ್ಷವು ತನ್ನ ಸಹಕಾರದ ದುರುಪಯೋಗವನ್ನು ಮಾಡಿಕೊಳ್ಳುತ್ತಿರುವುದೆಂದೂ, ಅದರಿಂದ ನಿರ್ದೋಷಿಗಳಿಗೆ ದುಃಖವಾಗುತ್ತಿರುವುದೆಂದೂ ಗೊತ್ತಾದಾಗ, ಇಂತಹ ಅಸಹಕಾರವನ್ನು ಹೂಡುವುದು ಯೋಗ್ಯವೂ ಆಹುದು ಅವಶ್ಯಕವೂ ಆಹುದು.

೫ ಈ ಅಸಹಕಾರದಲ್ಲಿ ವಿರೋಧಿಯು ಯಾವ ಕಾರ್ಯಗಳು ತನ್ನ ಪ್ರತ್ಯಕ್ಷ ಸಹಾಯದ ಹೊರತು ನಡೆಯುವುದಿಲ್ಲವೊ ಅಂತಹ ಎಲ್ಲ ಕಾರ್ಯಗಳಿಗೂ ನೆರವಾಗುವುದನ್ನು ನಿಲ್ಲಿಸಿಬಿಡಬೇಕಾಗುವುದು. ಪ್ರತ್ಯಕ್ಷವಲ್ಲದಿದ್ದರೂ ಅಪ್ರತ್ಯಕ್ಷ ಸಹಾಯದಿಂದ ವಿರೋಧಿಯ ಕಾರ್ಯವು ಸರಿಯಾಗಿ ನಡೆಯುತ್ತಿದ್ದರೆ, ಈ ಅಪ್ರತ್ಯಕ್ಷ ಸಹಾಯದಿಂದ ಅವನ ಪ್ರತಿಷ್ಠೆ ಬೆಳೆಯಲು ಅನುಕೂಲವಾಗುತ್ತಿದ್ದರೆ ಅದನ್ನೂ ನಿಲ್ಲಿಸಬೇಕು. ಹೀಗೆ ಮಾಡುವಾಗ ಸತ್ಯಾಗ್ರಹಿ ತನ್ನ ಲಾಭದ ಕಡೆಗೆ ಗಮನವನ್ನು ಕೊಡಲಾರನು.

೬ ಸತ್ಯಾಗ್ರಹೀ-ಪಕ್ಷದ ಸಹಾಯವಿಲ್ಲದೆ ತನ್ನ ತಂತ್ರವನ್ನು ನಡೆಸಲಾಗುವುದಿಲ್ಲವೆಂಬ ಅನುಭವವನ್ನು ವಿರೋಧಿಗೆ ಮಾಡಿಸುವುದೆ ಅಸಹಕಾರದ ಗುರಿ. ಆದ್ದರಿಂದ ತಂತ್ರವನ್ನು ತಡೆದು ನಿಲ್ಲಿಸುವ ವರೆಗೆ ಸತ್ಯ–ಅಹಿಂಸಾದಿ ಮಾರ್ಗಗಳಿಂದ ಅಸಹಕಾರವನ್ನು ಹೂಡಬಹುದು.

೭ ಈ ಅಸಹಕಾರವನ್ನು ಹೇಗೆ, ಎಷ್ಟು ಭರದಿಂದ ಪ್ರಾರಂಭಿಸಬೇಕೆನ್ನುವುದು ಅನುಭವದಿಂದ ಗೊತ್ತಾಗುವುದು. ಆದರೆ ಈ ಮಾರ್ಗವನ್ನು ಹಿಡಿಯುವವನಿಗೆ ವಿರೋಧಿಯ ಕೃತ್ಯಗಳು ಅಥವಾ ತಂತ್ರವು ಅತ್ಯಂತ ದುಷ್ಟವಾಗಿದೆ, ಅದರ ಸ್ಥಾನದಲ್ಲಿ ಇನ್ನೊಂದು ಒಳ್ಳೆಯ ತಂತ್ರವು ಬೇಗನೆ ಸ್ಥಾಪಿಸಲ್ಪಡದಿದ್ದರೂ ಅದು ನಷ್ಟವಾಗಿ ಹೋಗುವುದು ಒಳಿತು ಎನಿಸಬೇಕು.

೮ ಅಸಹಕಾರದ ದುರುಪಯೋಗವಾಗುವ ಸಂದರ್ಭವೂ ಉಂಟು. ಆದ್ದ

ರಿಂದ ಸತ್ಯಾಗ್ರಹಿ-ಅಸಹಕಾರ ಮತ್ತು ಅಸತ್ಯಾಗ್ರಹಿ-ಅಸಹಕಾರ ಎಂದು ಭೇದಮಾಡಬೇಕಾಗುವುದು. ಸತ್ಯಾಗ್ರಹದಲ್ಲಿ ದುಃಖವನ್ನು ಸಹಿಸಲೇ ಬೇಕಾಗುವುದು. ಅಸಹಕಾರಿಗೆ ಯಾವ ತರದ ದುಃಖವನ್ನೂ ಸಹಿಸುವ ಸಂದರ್ಭವು ಬರದಿದ್ದರೆ ಆ ಅಸಹಕಾರವು ಅಸತ್ಯಾಗ್ರಹಿ-ಅಸಹಕಾರವಿರ ಬಹುದು ಎಂದು ತಿಳಿಯಬೇಕು.

## ೧೦ ಸವಿನಯ ಕ್ಯಾದೆಭಂಗ

೧ ಸವಿನಯ ಕ್ಯಾದೆಭಂಗವು ಎರಡು ತರದ್ದು ಇರಬಹುದು: ಒಂದು, ಅತ್ಯಂತ ಅನ್ಯಾಯದ ಅಪ್ಪಣೆಯನ್ನಾಗಲಿ ಕಟ್ಟಳೆಯನ್ನಾಗಲಿ ಮಾತ್ರ ತಳ್ಳಿ ಹಾಕುವುದಕ್ಕಾಗಿ ಮಾಡಿದ್ದು. ಇನ್ನೊಂದು, ಅಸಹಕಾರವನ್ನೇ ಮುಂದುವರಿಸುವ ಹೆಜ್ಜೆ ಎಂದು, ನಿರ್ದೋಷ ಹಾಗೂ ತಟಸ್ಥರಿದ್ದ ಪ್ರಜರಿಗೆ ಅನಾನುಕೂಲ ವಾಗದಂತೆ, ಯಾವುದೆ ಅನ್ಯಾಯ, ಅಧರ್ಮ ಮಾಡದೆ ಮುರಿಯಲು ಬರುವಂಥ ಎಲ್ಲ ಕಟ್ಟಳೆಗಳನ್ನು ಮುರಿದು ಮಾಡಿದ್ದು.

೨ ಕದಿಯಬಾರದೆಂಬ ಕಟ್ಟಳೆ ಇರುವುದೆಂದೇ ಮನುಷ್ಯನು ಕಳವು ಮಾಡುವುದಿಲ್ಲ ಎನ್ನಲಾಗುವುದಿಲ್ಲ. ಕದಿಯುವುದು ಅಧರ್ಮವೆಂದು ಅವನು ಕದಿಯುವುದಿಲ್ಲ. ಆದ್ದರಿಂದ ಕಟ್ಟಳೆಭಂಗದಲ್ಲಿ ಇಂತಹ ಕಟ್ಟಳೆಗಳನ್ನು ಸೇರಿಸ ಲಾಗದು.

೩ ಬಂಡಿಗಳನ್ನು ಮಾರ್ಗದ ಎಡಬದಿಗುಂಟ ಹೊಡೆಯಬೇಕು, ಜನರು ಹೋಗಿಬರುವುದಕ್ಕಾಗಿ ಅನುಕೂಲತೆಗಳನ್ನು ಒದಗಿಸಿಕೊಡುವಂಥ ದಾರಿಯ ಮೇಲೆ ನಿಂತ ಪೋಲೀಸನ ಅಪ್ಪಣೆ ಪಾಲಿಸಬೇಕು, ಮಧ್ಯರಾತ್ರಿಯಲ್ಲಿ ಗದ್ದಲ ಮಾಡಕೂಡದು, ಮಹತ್ವದ ಕಾರಣವಿಲ್ಲದೆ ಉಗೆಬಂಡಿಯ ಸರಪಳಿಯನ್ನು ಎಳೆಯಬಾರದು, ಮುಂತಾದ ಕಟ್ಟಳೆಗಳನ್ನು ಮುರಿಯಬಾರದು. ಏಕೆಂದರೆ, ಇದರಿಂದ ತಟಸ್ಥ, ನಿರ್ದೋಷಿ ಪ್ರಜೆಗೆ ತೊಂದರೆಯಾಗುವುದು. ಆದ್ದರಿಂದ ಈ ತರದ ಕಟ್ಟಳೆಗಳ ಸವಿನಯ ಭಂಗ ಮಾಡಲಾಗದು.

೪ ಜನರು ಯಾವುದೊಂದು ರಾಜ್ಯದ ಬಗ್ಗೆ ತಮ್ಮ ಅಸಂತೋಷವನ್ನು ಎರಡು ಕಾರಣಗಳಿಂದ ವ್ಯಕ್ತಮಾಡುತ್ತಿರಲಿಕ್ಕಿಲ್ಲ. (೧) ಆ ರಾಜ್ಯದ ಬಗೆ ಅವರಲ್ಲಿ ಸಂತೋಷವಿರಬಹುದು, ಭಕ್ತಿ ಇರಬಹುದು. (೨) ಕಟ್ಟಳೆಗಳಿಗೆ ಹೆದರುತ್ತಿರಬಹುದು. ಆದರೆ ಆ ರಾಜ್ಯದ ಬಗ್ಗೆ ತನ್ನ ಅಸಂತೋಷವನ್ನು

ವ್ಯಕ್ತಮಾಡಲು ಸತ್ಯಾಗ್ರಹಿಗೆ ಹೆದರಿಕೆ ಅಡ್ಡಬರುವುದಿಲ್ಲ. ಸವಿನಯ ಕ್ಯಾದೆ ಭಂಗ ಮಾಡುವ ಸಂದರ್ಭ ಬಂದರೆ ಅನ್ಯಾಯದ ಕಟ್ಟಳೆಗಳನ್ನು ಮುರಿಯು ವುದೂ ಅವನ ಕರ್ತವ್ಯವಾಗುವುದು.

೫ ಹಾಗೆಯೇ, ತನ್ನ ದೇಶದ ಯಾವುದೇ ಭಾಗಕ್ಕೆ ಹೋಗಲು, ಅಲ್ಲಿ ವಾಸಮಾಡಲು, ಅದೇ ರೀತಿ ಶಾಂತವಾದ ಚಟುವಟಿಕೆಗಳನ್ನು ಸಾಗಿಸಲು, ಸಭೆ ಜಾತ್ರೆಗಳನ್ನು ಜರುಗಿಸಲು, ಪ್ರಜಾ-ಸೇವೆಯನ್ನು ಮಾಡಲು, ಅಯೋಗ್ಯ ಚಟಗಳ ವಿರುದ್ಧ ಸರ್ಪಕಾವಲು ಮಾಡಲು ಪ್ರತಿಯೊಬ್ಬನಿಗೂ ಅಧಿಕಾರ ವುಂಟು. ಇದಕ್ಕೆ ವಿರುದ್ಧವಾಗಿ ಸರಕಾರವು ಪ್ರತಿಬಂಧಕಾಜ್ಞೆಯನ್ನು ಹೊರ-ಡಿಸಿದರೆ ಅದನ್ನು ಕೆಳಗಿನ ಈ ಕಾರಣಗಳಿಂದ ಸತ್ಯಾಗ್ರಹಿಯು ಮುರಿಯುವು ದಿಲ್ಲ.

(ಅ) ಸರಕಾರವು ತೋರಿಸುವ ಪ್ರತಿಬಂಧದ ಕಾರಣಗಳು ಯೋಗ್ಯ ವೆನಿಸಿದರೆ; ಅಥವಾ

(ಆ) ಇಂಥ ಕಟ್ಟಳೆಗಳನ್ನು ಮುರಿಯತೊಡಗುವಾಗ ಸರಕಾರದ ಮತ್ತು ಪ್ರಜರ ನಡುವೆ ಇರುವ ಮುಖ್ಯ ತಕರಾರಿನ ಮೂಲ ಸಂಗತಿ ಒಂದು ಮೂಲೆ ಯಲ್ಲಿ ಉಳಿದುಬಿಡುವುದುಂಟು, ಅಪ್ರಸ್ತುತ ಸಂಗತಿಗಳಿಗೆ ಮಹತ್ವ ಬರುವು ದುಂಟು, ಪ್ರಜೆಗಳ ಗಮನವು ಮೂಲ ಮಾತಿನ ಕಡೆಗೆ ಹೋಗುವ ಬದಲು ಮಹತ್ವದ್ದಲ್ಲದ ಚಿಕ್ಕಪುಟ್ಟ ಸಂಗತಿಗಳ ಕಡೆಗೆ ಹೋಗುವ ಸಂಭವವುಂಟು. ಹೀಗಿದ್ದರೆ ಕಟ್ಟಳೆ-ಭಂಗಮಾಡಲಾಗದು. ಇಂಥ ಕಾರಣಗಳಿಲ್ಲದಿದ್ದರೆ ಇಂಥ ಕಟ್ಟಳೆಗಳ ಸವಿನಯ ಭಂಗಮಾಡಬಹುದು.

೬ ಹಾಗೆಯೇ, ರಾಜ್ಯವು ಇರುವುದು ಒಳಿತು ಎಂದು ತಿಳಿದೇ ಸತ್ಯಾಗ್ರಹಿ ರಾಜ್ಯಕ್ಕೆ ಕರವನ್ನು ಕೊಡುವನು. ಈ ರಾಜ್ಯವನ್ನು ನಾಶಮಾಡುವುದೇ ತನ್ನ ಧರ್ಮವೆಂದು ಅವನಿಗೆ ಮನದಟ್ಟಾದಾಗ ಅವನು ಕರನಿರಾಕರಣೆಯನ್ನು ಮಾಡು ವನು. ರಾಜ್ಯದಿಂದ ದೊರೆಯುವ ಎಲ್ಲ ಲಾಭಗಳನ್ನು ಪ್ರಯತ್ನಪೂರ್ವಕ ವಾಗಿ ತ್ಯಜಿಸುವನು.

೭ ಪ್ರಜಾಸತ್ತಾತ್ಮಕ ರಾಜ್ಯವು ನಡೆಯುತ್ತಿರುವಲ್ಲಿ, ಸರಕಾರ ಮತ್ತು ಪ್ರಜರಲ್ಲಿ ಸಹಕಾರವಿರುವಲ್ಲಿ, ಅವರ ನಡುವೆ ಕಡುತರವಾದ ಕಾಳಗ ನಡೆಯದೆ ಇದ್ದಲ್ಲಿ, ಅಧಿಕಾರಿಗಳು ತಪ್ಪು-ತಿಳಿವಳಿಕೆಯಿಂದ ಇಲ್ಲವೆ ಅಧಿಕಾರ ಮದದಿಂದ ಅನ್ಯಾಯದ ಕಟ್ಟಳೆಗಳನ್ನು ಹೊರಡಿಸುವುದುಂಟು. ಇಂಥ ಕಟ್ಟಳೆಗಳನ್ನು

ಮುರಿದೇಬಿಡಬೇಕೆಂಬುದು ಯೋಗ್ಯವಲ್ಲ. ಇಂಥ ಚಿಲ್ಲರೆ ಅನ್ಯಾಯಗಳನ್ನು ಸಹಿಸುವುದರಿಂದ ಹಾನಿಯಾಗುವುದೆಂದು ತಿಳಿಯಲಾಗದು. ಇಂತಹ ಸಂದರ್ಭಗಳಲ್ಲಿ ಪ್ರಜರೂ ಮುಂದಾಳುಗಳೂ ತೋರಿಸುವ ಧೈರ್ಯವೂ ಉದಾರ ತನವೂ ಬೋಧಪ್ರದವಾಗಿರುವವು. ಯಾವನು ಭಯವಿಲ್ಲದಿದ್ದರೂ, ಅನ್ಯಾ-ಯದ ಕಟ್ಟಳೆಗಳನ್ನು ಸಹನೆಮಾಡದೆ ತಿಳಿದೂ ತಿಳಿದೂ ಅವುಗಳಿಂದಾಗುವ ದುಃಖಸಹಿಸಿ ಅವನ್ನು ಪಾಲಿಸುವನೊ, ಅವನೇ ಸಮಯ ಬಂದಾಗ ಸವಿನಯ ಕ್ಕಾದೆಭಂಗವನ್ನು ಚನ್ನಾಗಿ ಮಾಡಬಲ್ಲನು.

೮ ವಿರೋಧಿಯ ಮತ್ತು ತಟಸ್ಥ ಜನರ ಜೀವಕ್ಕೂ ಆಸ್ತಿಗೂ ಸವಿನಯ ಕ್ಕಾದೆಭಂಗದಿಂದ ದುಃಖವೂ ಹಾನಿಯೂ ಆಗುತ್ತಿರುವುದೆಂದು ತೋರಿದ ಕೂಡಲೆ ಸತ್ಯಾಗ್ರಹಿ ಹಾಗಾಗದಂತೆ ಮಾಡಲು ಯತ್ನಿಸುವನು. ಈ ತನ್ನ ಪ್ರಯತ್ನವು ಫಲಿಸುವುದಿಲ್ಲವೆಂದು ತೋರಿದ ಕೂಡಲೆ ಸವಿನಯ ಕಟ್ಟಳೆ-ಭಂಗ ವನ್ನು ನಿಲ್ಲಿಸಿಬಿಡುವನು. ಇಂತಹ ಹಾನಿಯನ್ನೂ ದುಃಖವನ್ನೂ ನಿಲ್ಲಿಸು ವುದಕ್ಕಾಗಿ ಸತ್ಯಾಗ್ರಹಿ ತನ್ನ ಸರ್ವಶಕ್ತಿಯನ್ನೂ ವೆಚ್ಚಮಾಡುವನು.

## ೧೧ ಕೋರ್ಟಿನಲ್ಲಿ ಸತ್ಯಾಗ್ರಹಿಯ ನಡತೆ

೧ ಸವಿನಯ ಕಟ್ಟಳೆ-ಭಂಗದ ಸಂಕಲ್ಪಮಾಡುವವನು ಅದರಿಂದ ಆಗುವ ಪೂರ್ಣ ಶಿಕ್ಷೆಯನ್ನು ಅನುಭವಿಸಲು ಸಿದ್ಧನೇ ಇರುವನು.

೨ ಇಂಥದೊಂದು ಕಟ್ಟಳೆಯನ್ನು ಸತ್ಯಾಗ್ರಹಿಯು ಮುರಿದಿರುವನೆಂದು ತಪ್ಪುಹೊರಿಸಿ ಅವನನ್ನು ಬಂಧಿಸಲು ಬಂದ ಅಧಿಕಾರಿಯ ವಶಕ್ಕೆ ಅವನು ಹಿಂದು-ಮುಂದು ನೋಡದೆ ಹೋಗಬೇಕು..

೩ ಸತ್ಯಾಗ್ರಹಿ ನಿಜವಾಗಿ ಕಟ್ಟಳೆ ಮುರಿಯದಿದ್ದರೂ ಅವನ ವಿರುದ್ಧ ಸುಳ್ಳು ಪ್ರಮಾಣಗಳನ್ನು ಹುಟ್ಟಿಸಿ ಕಟ್ಟಳೆ-ಭಂಗ ಮಾಡಿರುವನೆಂದು ಪೋಲೀಸರು ತೋರಿಸಬಹುದು. ಹೀಗಿದ್ದಲ್ಲಿ ಕೋರ್ಟಿನ ಕಾರ್ಯದಲ್ಲಿ ಸತ್ಯಾ ಗ್ರಹಿಯು ಯಾವ ತರದಿಂದಲೂ ಪಾಲುಗೊಳ್ಳುವುದಿಲ್ಲ, ತನ್ನ ರಕ್ಷಣೆಯನ್ನೂ ಮಾಡಿಕೊಳ್ಳುವುದಿಲ್ಲ. ಕಟ್ಟಳೆ-ಭಂಗ ಮಾಡುವುದೇ ಅವನ ವಿಚಾರವಿದ್ದುದ ರಿಂದ ಕಟ್ಟಳೆ ಮುರಿಯದಿದ್ದರೂ ಅವನಿಗೆ ಶಿಕ್ಷೆಯಾಗುತ್ತಿದ್ದರೆ ಅದನ್ನು ಹೊಂದುವುದು ಯೋಗ್ಯವೇ ಸರಿ.

೪ ಸ್ವತಃ ಕಟ್ಟಳೆಗಳನ್ನು ಮುರಿದಿದ್ದರೆ ತನ್ನ ಅಪರಾಧವನ್ನು ಒಪ್ಪಿಕೊಂಡು

ಶಿಕ್ಷೆ ವಿಧಿಸಲು ನ್ಯಾಯಾಧೀಶನಿಗೆ ಹೇಳಬೇಕು.

೫ 'ರಕ್ಷಣೆ' ಮಾಡಿಕೊಳ್ಳದೆ ಇರುವ ವಿಷಯುಗಳಲ್ಲಿ ಕೆಳಗಿನವು ಅಪವಾದಗಳು:

(ಅ) ಸತ್ಯಾಗ್ರಹ-ಸಿದ್ಧಾಂತಕ್ಕೆ ವಿರುದ್ಧವಾದ ಅಪರಾಧಗಳನ್ನು ಮಾಡುವ ವಿಚಾರವಿಲ್ಲದಿದ್ದರೂ ಸತ್ಯಾಗ್ರಹಿಯು ಮೇಲೆ ಅವನು ಅಂಥ ಅಪರಾಧಗಳ ಆರೋಪ ಹೊರಿಸಿದರೆ ಆಗ ಅಪರಾಧಿಯೆನಿಸಿಕೊಂಡವನು ಸತ್ಯಕ್ಕೋಸ್ಕರ ತನ್ನ ರಕ್ಷಣೆ ಮಾಡಿಕೊಳ್ಳಬೇಕು. ಉದಾಹರಣೆಗೆ: ಕೊಲೆಯ ಆರೋಪವನ್ನು ಹೊರಿಸಿದಾಗ.

(ಆ) ಸತ್ಯಾಗ್ರಹಿಗಳ ಅಥವಾ ಅಧಿಕಾರಿಗಳ ನಡತೆಯು, ನೀತಿಯು ವಿಷಯುವು ಚರ್ಚಾಸ್ಪದವಾಗಿ ಅದರಲ್ಲಿ ಸತ್ಯಾಂಶವು ಹೊರಬೀಳುವುದು ಅತ್ಯಂತ ಅವಶ್ಯವೆಂದು ಕಂಡುಬಂದರೆ ಸತ್ಯಾಗ್ರಹಿ ತನ್ನ ರಕ್ಷಣೆಮಾಡಿಕೊಳ್ಳಬೇಕು. ಉದಾಹರಣೆಗೆ: ಪೋಲೀಸರು ಅತ್ಯಾಚಾರ ಮಾಡಿರುವರೆಂಬುದನ್ನು ಸರಿಯಾಗಿ ಅರಿತುಕೊಂಡು ಅದನ್ನು ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಿದ ಮೇಲೆ, ಅದು ಸುಳ್ಳೆಂದು ಪ್ರತಿಪಾದಿಸಿ ಸುಳ್ಳು ಸುದ್ದಿ ಪ್ರಕಟಿಸಿದ್ದಕ್ಕಾಗಿ ಸತ್ಯಾಗ್ರಹಿಯು ಮೇಲೆ ಕಟ್ಟಳೆ ಹೂಡಿದಾಗ; ಸತ್ಯಾಗ್ರಹಿಯು ಹೊಡೆದಾಟಕ್ಕೆ, ರಕ್ತಪಾತಕ್ಕೆ ಉತ್ತೇಜನ ಕೊಡುವನೆಂದು ಆರೋಪವಿದ್ದಾಗ.

(ಇ) ಅಧಿಕಾರಿಗಳು ಅತಿ ಉತ್ಸಾಹದಿಂದಲೂ ತಪ್ಪು ಗ್ರಹಿಕೆಯಿಂದಲೂ ಒಮ್ಮೊಮ್ಮೆ ಅನ್ಯಾಯುದ ಕಟ್ಟಳೆಗಳನ್ನು ಹೊರಡಿಸುವರು. ಅಂಥ ಕಟ್ಟಳೆ ಹೊರಡಿಸುವುದು ಸರಕಾರದ ಇಚ್ಛೆ ಇದ್ದಿಲ್ಲವೆಂದು ತಿಳಿದುಕೊಳ್ಳಲಿಕ್ಕೆ ಪ್ರಬಲವಾದ ಕಾರಣಗಳು ದೊರೆತರೆ, ಆ ಹುಕುಮುಗಳಿಗೆ ಕ್ಯಾದೆಗಳ ಆಧಾರ ಸಾಕಷ್ಟು ಇಲ್ಲ ಎಂದು ತಿಳಿದುಕೊಳ್ಳಲು ಬರುವಂತಿದ್ದರೆ, ಮತ್ತು ಆ ಹುಕುಮುಗಳಿಗೆ ಕ್ಯಾದೆಗಳ ಆಧಾರ ಸಾಕಷ್ಟು ಇಲ್ಲ ಎಂದು ತಿಳಿದುಕೊಳ್ಳಲು ಬರುವಂತಿದ್ದರೆ, ಮತ್ತು ಆ ಹುಕುಮುಗಳನ್ನು ಮುರಿಯುವ ವಿಚಾರವಿಲ್ಲದಂಥ ಪ್ರಜೆಗೆ ಅವುಗಳಿಂದ ಅತ್ಯಂತ ಕಷ್ಟವಾಗುವುದೆಂದು ಎನಿಸಿದರೆ ಸತ್ಯಾಗ್ರಹಿ ತನ್ನ ರಕ್ಷಣೆ ಮಾಡಿಕೊಳ್ಳುವ ಅವಶ್ಯಕತೆ ಉಂಟಾಗುವುದು.

೬ ಸತ್ಯಾಗ್ರಹಿಯು ಕೋರ್ಟಿನ ಕಾರ್ಯದಲ್ಲಿ ಪಾಲುಗೊಳ್ಳುವುದಿಲ್ಲ. ಕೋರ್ಟಿನಲ್ಲಿ ಸತ್ಯಾಗ್ರಹಿಯು ಉದ್ಧಟತನದಿಂದಲೂ ಅವಿನಯದಿಂದಲೂ ವರ್ತಿಸಬೇಕೆಂದು, ಅಥವಾ ಸುಳ್ಳು ಹೇಳಬೇಕೆಂದು ಇದರ ಅರ್ಥವಲ್ಲ. ಆದ್ದ

ರಿಂದ ಸತ್ಯಾಗ್ರಹಿಯು ಯಾವನೇ ಅಧಿಕಾರಿಗೆ ಅಪಮಾನವನ್ನೂ ಕುಚೇಷ್ಟೆಯನ್ನೂ ಮಾಡಬಾರದು; ಸೊಕ್ಕಿನ ಉತ್ತರಗಳನ್ನು ಕೊಡಬಾರದು. ತನ್ನ ಹೆಸರನ್ನು ಮುಚ್ಚಿಡಬಾರದು. ತನ್ನ ವಿಚಾರಣೆಗೆ ಸಂಬಂಧಪಡದ, ಅನ್ಯ ಆರೋಪಿಗಳಿಗಾಗಲಿ ಮನುಷ್ಯರಿಗಾಗಲಿ ಸಂಬಂಧಪಟ್ಟ ವಿಷಯಗಳ ಬಗ್ಗೆ ಅಧಿಕಾರಿಗಳು ವಿಚಾರಿಸಿದರೆ ಅವುಗಳಿಗೆ ಉತ್ತರ ಕೊಡಲು ಸತ್ಯಾಗ್ರಹಿಯು ಬದ್ಧನಲ್ಲ. ಆದ್ದರಿಂದ ಈ ತರದ ಪ್ರಶ್ನೆಗಳಿಗೆ ಉತ್ತರ ಕೊಡಲಾರೆನೆಂದು ಅವನು ವಿನಯದಿಂದ ಹೇಳಬೇಕು.

೭ ತಮ್ಮ ವಶದಲ್ಲಿರುವಾಗ ಸತ್ಯಾಗ್ರಹಿಗೆ ಸ್ನಾನ ಮಾಡಿಸುವುದು, ಬಟ್ಟೆ ಒಗೆಯಲು ಬಿಡುವುದು, ಉಣಿಸುವುದು, ಕಾಣಲು ಬಂದ ಮಿತ್ರರನ್ನೂ ಸಲಹೆಗಾರರನ್ನೂ ಭೆಟ್ಟಿಮಾಡಿಸುವುದು, ಮತ್ತು ಅವನೊಡನೆ ಸಭ್ಯತನದಿಂದ ವರ್ತಿಸುವುದು ಪೋಲೀಸಿನವರ ಕರ್ತವ್ಯ. ಅದರಂತೆ ಪೋಲೀಸರೊಡನೆ ವಿನಯದಿಂದ ವರ್ತಿಸುವುದೂ ಸತ್ಯಾಗ್ರಹಿಯ ಕರ್ತವ್ಯ. ಒಂದು ವೇಳೆ ಪೋಲೀಸರು ತನ್ನೊಡನೆ ಅಸಭ್ಯತನದಿಂದ ವರ್ತಿಸಿದರೆ, ತನಗೆ ಅನಾನುಕೂಲತೆ ಮಾಡಿದರೆ, ಹೊಡೆದರೆ, ಬಯ್ದರೆ ಸತ್ಯಾಗ್ರಹಿ ಅದನ್ನು ಅವರ ಮೇಲಧಿಕಾರಿಗೆ ತಿಳಿಸಬೇಕು. ಮೇಲಧಿಕಾರಿ ಕಾಣಲು ಸಿಗದಿದ್ದರೆ, ಅಥವಾ ತನ್ನ ಮಾತಿಗೆ ಲಕ್ಷ್ಯಗೊಡದಿದ್ದರೆ ನಡೆದುದನ್ನು ನ್ಯಾಯಾಧೀಶರಿಗೆ ತಿಳಿಸಬೇಕು. ಅವರು ಇತ್ತ ಲಕ್ಷ್ಯಗೊಡದಿದ್ದರೆ ಈ ಕಷ್ಟಗಳು ಸರಕಾರಕ್ಕೆ ಸಮ್ಮತವೆಂದು ತಿಳಿದುಕೊಂಡು ಅದನ್ನು ತನ್ನ ಸಲಹೆಗಾರರಿಗೆ ತಿಳಿಸಿ ಶಾಂತ ರೀತಿಯಿಂದ ಇರಬೇಕು.

೮ ತನಗೆ ದಂಡವಾದರೆ ದಂಡದ ಹಣವನ್ನು ಸತ್ಯಾಗ್ರಹಿ ತಾನಾಗಿಯೇ ಕೈಯೆತ್ತಿ ಕೊಡಬಾರದು, ಕೊಡಲು ಯಾರಿಗೂ ಹೇಳಬಾರದು. ದಂಡ ಕೊಡದಿರುವುದೆ ತನ್ನ ಧರ್ಮವೆಂದು ತಿಳಿದು ಅದಕ್ಕಾಗಿ ಆದ ಶಿಕ್ಷೆಯನ್ನು ಸಹಿಸಿಕೊಳ್ಳಬೇಕು.

೯ ಅಧಿಕಾರಿಗಳು ದಂಡದ ಹಣವನ್ನು ವಸೂಲು ಮಾಡಲು ಮನೆಗೆ ಜಪ್ತಿಗೆ ಬಂದರೆ ಅಡ್ಡಿಮಾಡಬಾರದು. ಅದರಿಂದ ಆಗುವ ಹೆಚ್ಚಿನ ಹಾನಿಯನ್ನೂ ಸಹಿಸಬೇಕು. ದಂಡವನ್ನು ಸ್ವತಃ ಕೈಯೆತ್ತಿ ಎಂದಿಗೂ ಕೊಡಬಾರದು. ತನ್ನ ಸತ್ವ-ರಕ್ಷಣೆಗಾಗಿ ಕಟ್ಟಳೆಗಳನ್ನು ಮುರಿದವನು .ಅದರಿಂದ ಆಗುವ ಕಷ್ಟನಷ್ಟಗಳಿಗೆಲ್ಲ ಸಿದ್ಧನೇ ಇರುವನು. ಆದುದರಿಂದ ಅವನು ತನ್ನ ಕೈಯಿಂದ ದಂಡದ ಹಣವನ್ನು ಕೊಟ್ಟು ತನ್ನ ಸತ್ವಹಾನಿ ಮಾಡಿಕೊಳ್ಳುವುದಿಲ್ಲ.

೧೦ ಸತ್ಯಾಗ್ರಹಿಯು ಸೆರೆಮನೆಯಲ್ಲಿ ಉಚ್ಚವರ್ಗವನ್ನು ಪಡೆಯಲು ಯತ್ನಿಸಬಾರದು. ಏಕೆಂದರೆ ಈ ವರ್ಗೀಕರಣದಲ್ಲಿ ಸತ್ಯಾಗ್ರಹಿ-ಸತ್ಯಾಗ್ರಹಿಗಳಲ್ಲಿ, ಸತ್ಯಾಗ್ರಹಿ-ಸಾಮಾನ್ಯ ಕೈದಿಗಳಲ್ಲಿ ಭೇದವನ್ನುಂಟುಮಾಡುವ ಉದ್ದೇಶವು ಹಲವು ಮಟ್ಟಿಗೆ ಇರುತ್ತದೆ. ಇದರಿಂದ ಅಸೂಯೆ, ಭಯ, ಮತ್ತು ಅತ್ಯಾಶೆಯು ಹೆಚ್ಚುವುದು. ಮೇಲಾಗಿ ಈ ವರ್ಗೀಕರಣದ ಬಳಿಕೆ ಮನ ಬಂದಂತೆ ನಡೆಯುವುದು. ಇದರಿಂದ ಮೇಲಿನ ವರ್ಗದವರನ್ನು ಕೆಳಗಿನ ವರ್ಗಕ್ಕೆ ಹಾಕಿ ಶಿಕ್ಷಿಸಲು ಅನುವಾಗುವುದು. ಆದ್ದರಿಂದ ವರ್ಗೀಕರಣದ ಘೋರಣೆಯೇ ಯೋಗ್ಯವಲ್ಲ. ಆದರೂ ಸತ್ಯಾಗ್ರಹಿ, ತನಗೆ ಸಿಕ್ಕ ವರ್ಗದ ಅನುಕೂಲತೆಗಳನ್ನು ಭೋಗಿಸಿದರೆ ಸತ್ಯದ ಭಂಗವಾಗುವುದೆಂದು ಎನ್ನಲಾಗದು.

## ೧೨ ಸೆರೆಮನೆಯಲ್ಲಿ ಸತ್ಯಾಗ್ರಹಿಯ ನಡತೆ

೧ ಸತ್ಯಾಗ್ರಹಿಯು ಸೆರೆಮನೆಯಲ್ಲಿ ಕೂಡ ಸಭ್ಯ ರೀತಿಯಿಂದಲೂ ನಮ್ರತೆಯಿಂದಲೂ ವರ್ತಿಸುವನು.

೨ ಸೆರೆಮನೆಯ ನಿಯಮಗಳನ್ನು ಮುರಿಯಬಾರದು. ಅವನ್ನು ಪಾಲಿಸುವ ಪ್ರವೃತ್ತಿ ಇರಬೇಕು. ಅವಕ್ಕೆ ಅನುಸಾರವಾಗಿ ಸೆರೆಮನೆಯಲ್ಲಿ ತನ್ನ ಜೀವನ-ಕ್ರಮವನ್ನು ಇಟ್ಟುಕೊಳ್ಳಬೇಕು. ಸಿದ್ಧಾಂತಕ್ಕೆ, ಸ್ವಾಭಿಮಾನಕ್ಕೆ, ಕುಂದುತರುವ ನಿಯಮಗಳನ್ನು ಮಾತ್ರ ಮುರಿಯಲು ಯತ್ನಿಸಬೇಕು. ಆದ್ದರಿಂದ ಯಾವ ವಸ್ತುವನ್ನೂ ಕದ್ದು ಸೆರೆಮನೆಯಲ್ಲಿ ತರಬಾರದು. ನಿಯಮದ ಹೊರಗಿನ ಅನುಕೂಲತೆಯನ್ನು ಒದಗಿಸಿಕೊಳ್ಳಲು ಯಾವ ಅಧಿಕಾರಿಗೂ ಲಂಚ ಕೊಡಬಾರದು, ಅವರನ್ನು ದೈನ್ಯದಿಂದ ಬೇಡಲೂ ಬಾರದು.

೩ ದುಡಿಯುವುದು ಸೆರೆಮನೆಯ ನಿಯಮ ಮಾತ್ರವಲ್ಲ – ಸೃಷ್ಟಿಯ ನಿಯಮ, ಧರ್ಮದ ನಿಯಮ. ಆದುದರಿಂದ ಸೆರೆಮನೆಯ ನಿಯಮದ ಮೇರೆಗೆ ಒಪ್ಪಿಸಿಕೊಟ್ಟಷ್ಟು ಕೆಲಸವನ್ನು ಸ್ವೀಕರಿಸಲು, ಅದನ್ನು ಮಾಡಲು ಸತ್ಯಾಗ್ರಹಿಯು ಹಿಂದು-ಮುಂದು ನೋಡಬಾರದು.

೪ ತನಗೆ ನಿಯಮಿಸಿಕೊಟ್ಟ ಕೆಲಸವು ನಿಯಮಿಸಿದ ವೇಳೆಯಲ್ಲಿ ಅನಾರೋಗ್ಯದ ಅಥವಾ ಮತ್ತಾವ ಕಾರಣದಿಂದಾದರೂ ಆಗುವಂತಿಲ್ಲದಿದ್ದರೆ ಆ ವಿಷಯವಾಗಿ ಅಧಿಕಾರಿಗೆ ವಿನಯದಿಂದ ತಿಳಿಸಬೇಕು. ಪುನಃ ಕೆಲಸ

ಮಾಡಲು ಹೇಳಿದರೆ ಸಾಧ್ಯವಿದ್ದಷ್ಟು ಮಾಡಲು ಯತ್ನಿಸಬೇಕು. ಆದರಿಂದ ಆಯಾಸವೂ ದುಃಖವೂ ಆದರೆ ಸಹಿಸಿಕೊಳ್ಳಬೇಕು.

೫ ಡಾಕ್ಟರರು ಆರೋಗ್ಯವನ್ನು ಪರೀಕ್ಷಿಸುವಾಗ ಸತ್ಯಾಗ್ರಹಿಯು ತನ್ನಲ್ಲಿದ್ದ ರೋಗಗಳನ್ನು ಬಚ್ಚಿಡದೆ ಹೇಳಬೇಕು. ಅಂಟು-ರೋಗವಿದ್ದರೆ ನಾಚಿಕೆಯಿಂದ ಅದನ್ನು ಬಚ್ಚಿಟ್ಟುಕೊಳ್ಳಲಾಗದು.

೬ ತನ್ನ ಧರ್ಮಕ್ಕಾಗಲಿ ನಿಯಮಕ್ಕಾಗಲಿ ಕುಂದು ತರುವ ಔಷಧೋಪಚಾರವನ್ನು ಪಡೆಯಲು ಕೈದಿಯು ಬದ್ಧನಲ್ಲ. ಆದರೆ ಅನ್ಯತರದ ಔಷಧೋಪಚಾರವನ್ನು ಅಧಿಕಾರವಾಣಿಯಿಂದ ಬೇಡಲಾರನು. ಪ್ಯೈಲಿ ಚುಚ್ಚಿಸಿಕೊಳ್ಳದಿರುವುದೇ ಮುಂತಾದುವುಗಳಿಗಾಗಿ ಶಿಕ್ಷೆಯನ್ನು ಅನುಭವಿಸಬೇಕಾಗುವುದು. ನಿಜವಾಗಿಯೂ ಇಂತಹ ಔಷಧೋಪಚಾರದ ಬಗ್ಗೆ ಧಾರ್ಮಿಕ ಆಗ್ರಹವಿದ್ದರೆ ಮಾತ್ರ ಶಿಕ್ಷೆಗೆ ಗುರಿಯಾಗಬೇಕು. ಶಿಕ್ಷಿಸಿಕೊಳ್ಳುವುದಕ್ಕೆಂದೇ ಸುಮ್ಮಸುಮ್ಮನೆ ತನ್ನ ನಿಯಮಕ್ಕೆ ಧಾರ್ಮಿಕ ಸ್ವರೂಪವನ್ನು ಕೊಟ್ಟು ಅದಕ್ಕಾಗಿ ಆಗ್ರಹ ಹಿಡಿಯಬಾರದು.

೭ ಸತ್ಯಾಗ್ರಹಿ ತನ್ನ ಆರೋಗ್ಯಸಂಬಂಧವಾಗಿ ಏನಾದರೂ ಹೇಳಬೇಕಾಗಿದ್ದರೆ, ತನಗೆ ಯಾವುದಾದರೂ ಅನುಕೂಲತೆ ಬೇಕಾಗಿದ್ದರೆ, ಅದನ್ನು ಒದಗಿಸಿಕೊಡಬಲ್ಲ ಯೋಗ್ಯ ಅಧಿಕಾರಿಗೆ ತಿಳಿಸಬೇಕು. ಅಧಿಕಾರಿಯು ಅತ್ತ ಸರಿಯಾಗಿ ಗಮನಕೊಡದಿದ್ದರೆ ಅದೂ ಸತ್ಯಾಗ್ರಹದಲ್ಲಿ ಆಗತಕ್ಕ ಕಷ್ಟಗಳಲ್ಲಿ ಒಂದೆಂದು ತಿಳಿದು ಅದನ್ನು ಸಹಿಸಬೇಕು. ತನಗೆ ಬೇಕಾದ ಅನುಕೂಲತೆಗಳನ್ನು ಕಳವಿನಿಂದ ಒದಗಿಸಿಕೊಂಡು ತನ್ನ ಆರೋಗ್ಯ-ಸುಧಾರಣೆಯ ಯತ್ನವನ್ನು ಮಾಡಬಾರದು. ಒಂದು ವೇಳೆ ಹೀಗೆ ಮಾಡಿದರೆ ಅವನ ಬೇಡಿಕೆಗಳು ಅಯೋಗ್ಯವಿದ್ದುವೆಂದು ಅಧಿಕಾರಿ ತಿಳಿದುಕೊಳ್ಳುವನು.

೮ ತಾನು ಸೆರೆಮನೆಯಲ್ಲಿ ಕೂಡ ಪಾಲಿಸಬೇಕಾದ ಯಾವುದಾದರೂ ವ್ರತ-ನಿಯಮವಿದ್ದರೆ ಅದನ್ನು ಸತ್ಯಾಗ್ರಹಿ ಯೋಗ್ಯ ಅಧಿಕಾರಿಗೆ ಅರುಹಬೇಕು. ಅದಕ್ಕಾಗಿ ಯೋಗ್ಯ ಅನುಕೂಲತೆಗಳನ್ನು ಕೇಳಬೇಕು. ವ್ರತೋಪಾಸಕನು ತನ್ನ ವ್ರತಪಾಲನೆಗಾಗಿ ತಗಲುವ ವೆಚ್ಚವನ್ನು ಸರಕಾರವೇ ಹೊರಬೇಕೆಂಬ ಹಟ ಹಿಡಿಯಬಾರದು. ತನ್ನ ವೆಚ್ಚದಿಂದ ವ್ರತವನ್ನು ಪಾಲಿಸಲು ಅಪ್ಪಣೆ ದೊರೆತರೆ ಅಷ್ಟರಿಂದಲೇ ಸಂತುಷ್ಟನಾಗಬೇಕು. ಒಂದು ವೇಳೆ ಅಪ್ಪಣೆ ದೊರೆಯದೆ ವ್ರತಪಾಲನೆ ಕಷ್ಟವಾದರೆ ಅದನ್ನು ಸಹಿಸಿಕೊಳ್ಳಬೇಕು.

೯ ಸೆರೆಮನೆಯ ಮಟ್ಟಿಗೆ ಯಾವುದಾದರೂ ವಿಶೇಷತರದ ವ್ರತನಿಯಮವನ್ನು ಸತ್ಯಾಗ್ರಹಿ ಹಿಡಿಯಬಾರದು.

೧೦ ಕೈದಿಯು ಹೊಡೆತಗಳನ್ನು, ಅಥವಾ ಬೈಗಳನ್ನು ತಿನ್ನಬೇಕೆಂದು ವಿಧಿಯಿಲ್ಲ. ಎಂಜಲು, ತಂಗುಳು, ಹೊಲಸು, ಅರೆಬೆಂದ ಅಥವಾ ಹುಳುಗಳಿದ್ದ ಆಹಾರವನ್ನು ತಿನ್ನಬೇಕೆಂಬ ನಿಯಮವೂ ಇಲ್ಲ. ಆದ್ದರಿಂದ ಇಂಥ ಆಹಾರವನ್ನು ಕೊಟ್ಟರೆ, ಹೊಡೆದರೆ, ಬೈದರೆ, ಸಹಿಸಿಕೊಳ್ಳಬಾರದು. ಆ ಬಗ್ಗೆ ಫಿರ್ಯಾದಿಯನ್ನು ಮಾಡಬೇಕು. ಅದನ್ನು ಕೇಳದೆ ಮತ್ತೆ ಮತ್ತೆ ಹೊಡೆಯಲಾರಂಭಿಸಿದರೆ, ಬೈಯತೊಡಗಿದರೆ, ಶಿಕ್ಷೆ ಕೊಟ್ಟರೆ ಎಲ್ಲವನ್ನೂ ಸಹಿಸಬೇಕು. ಕೆಲಸ ಮಾಡಲು ಮಾತ್ರ ಒಲ್ಲೆನ್ನಬಾರದು. ಅವಶ್ಯವೆನಿಸಿದರೆ ಉಪವಾಸ ಮಾಡಬೇಕು.

೧೧ ತಿನ್ನಲಾಗದಂಥ ಆಹಾರವನ್ನು ಸತ್ಯಾಗ್ರಹಿ ಸ್ವೀಕರಿಸಬಾರದು. ಇದಕ್ಕಾಗಿ ಶಿಕ್ಷೆಯಾದರೆ ಸಹಿಸಿಕೊಳ್ಳಬೇಕು.

೧೨ ಸತ್ಯಾಗ್ರಹಿ, ತನಗಾಗಿ ಮತ್ತು ತನ್ನ ವರ್ಗದ ಕೈದಿಗಳ ಸಲುವಾಗಿ ಮಾತ್ರವೇ ಸೆರೆಮನೆಯ ನಿಯಮಗಳಲ್ಲಿ ತಿದ್ದುಪಡೆಮಾಡಲು, ಅನುಕೂಲತೆಗಳನ್ನು ಒದಗಿಸಿಕೊಳ್ಳಲು, ಸೆರೆಮನೆಯಲ್ಲಿ ಸತ್ಯಾಗ್ರಹ ಹೂಡಬಾರದು. ಬರಿಯ ತನಗೆ ಮತ್ತು ತನ್ನ ವರ್ಗದ ಕೈದಿಗಳಿಗೆ ಮಾತ್ರವೇ ಅನ್ಯಾಯವಾಗುತ್ತಿದ್ದರೆ ಸತ್ಯಾಗ್ರಹವನ್ನು ಹೂಡಬಹುದು. ಸೆರೆಮನೆಯ ಇಡಿಯ ಆಡಳಿತದಲ್ಲಿ ಸುಧಾರಣೆ ಅವಶ್ಯವೆಂದು ತೋರಿದರೆ, ಮತ್ತು ಅದಕ್ಕೆ ತಕ್ಕ ಪರಿಸ್ಥಿತಿಯು ಇದ್ದರೆ ಮಾತ್ರ ಸತ್ಯಾಗ್ರಹವನ್ನು ಮಾಡಬಹುದು.

೧೩ ಸೆರೆಮನೆಯ ಆಡಳಿತ ವ್ಯವಸ್ಥಿತವಾಗಿ ನಡೆಯುವಂತೆ ವರ್ತಿಸುವುದು, ಸಹಕಾರವನ್ನೀಯುವುದು ಸತ್ಯಾಗ್ರಹ-ಸಿದ್ಧಾಂತಕ್ಕೆ ವಿರೋಧವಲ್ಲ. ಆ ಬಗ್ಗೆ ಅಧಿಕಾರಿಗಳಿಗೆ ಎಲ್ಲ ರೀತಿಯ ಸಹಾಯ ಮಾಡುವುದು ಸತ್ಯಾಗ್ರಹಿಯ ಧರ್ಮ. ಆದರೆ ಸತ್ಯಾಗ್ರಹಿಯು ವಾರ್ಡರ್ ಮತ್ತು ವಾಚ್‌ಮನ್ನರ ಅಧಿಕಾರಗಳನ್ನು ಸ್ವೀಕರಿಸಬಾರದು.

೧೪ ಬಿಡುವಿನ ದಿನಗಳನ್ನು ಹೆಚ್ಚಿಸಿಕೊಳ್ಳಲು ಸತ್ಯಾಗ್ರಹಿ ಆಶೆಪಡಬಾರದು.

೧೫ ಇಡೀ ದೇಶದ ಆಳಿಕೆಯಲ್ಲಿ ಸಂಪೂರ್ಣ ಬದಲಾವಣೆ ಮಾಡುವುದೇ, ಸ್ವರಾಜ್ಯ ಸಂಪಾದನೆಯ ಸಲುವಾಗಿ ಹೂಡಿದ ಸತ್ಯಾಗ್ರಹದ ಉದ್ದೇಶ. ಆದ್ದ

ರಿಂದ ಸೆರೆಮನೆಯ ಸುಧಾರಣೆಗಾಗಿ ಸೆರೆಮನೆಯಲ್ಲಿ ಒಂದು ಸ್ವತಂತ್ರವಾದ ಸತ್ಯಾಗ್ರಹ-ಯುದ್ಧವನ್ನು ಹೂಡಬಾರದು. ಆದರೆ ಸೆರೆಮನೆಯಲ್ಲಿ ಅಕ್ಷಮ್ಯ ವರ್ತನೆ, ಅಮಾನುಷ ವರ್ತನೆ ಇದ್ದರೆ, ನಿಯಮಗಳಿದ್ದರೆ, ಅವುಗಳ ವಿರುದ್ಧವಾಗಿ ಸಂದರ್ಭಬಂದರೆ ಸತ್ಯಾಗ್ರಹ-ಯುದ್ಧವನ್ನು ಹೂಡಬೇಕು.

## ೧೩ ಸತ್ಯಾಗ್ರಹಿಯ ನಿಯಮಾವಲಿ

ಸ್ವಲ್ಪ ಪುನರುಕ್ತಿಯ ದೋಷವಾದರೂ, ೧೯೩೦ರ ಫೆಬ್ರುವರಿ ೨೩ರಂದು ಪ್ರಕಟವಾದ 'ನವಜೀವನ'ದಲ್ಲಿ ಗಾಂಧೀಜಿಯವರು ಕೊಟ್ಟಿರುವ 'ಸತ್ಯಾಗ್ರಹಿಯ ನಿಯಮಾವಲಿ'ಯನ್ನು ಇಲ್ಲಿ ಕೊಡಲಾಗಿದೆ. ಅದರಿಂದ ಈ ಖಂಡದ ಯೋಗ್ಯತೆ ಪೂರ್ಣವಾಗುವುದಲ್ಲದೆ ಅತ್ಯಂತ ಸುಂದರವಾದ ಉಪಸಂಹಾರವೂ ಆಗುವುದು.

೧ ಸತ್ಯದ ಬಗ್ಗೆ ಆಗ್ರಹವೇ ಸತ್ಯಾಗ್ರಹ. ಈ ಆಗ್ರಹದಿಂದ ಮನುಷ್ಯನಿಗೆ ಅತುಲ ಬಲವು ಬರುವುದು. ಈ ಬಲ ಸತ್ಯಾಗ್ರಹದ ಬಲ ಎಂದು ತಿಳಿಯುವೆವು.

೨ ಸತ್ಯದ ಬಗ್ಗೆ ನಿಜವಾಗಿಯೂ ನಮ್ಮ ಆಗ್ರಹವಿದ್ದರೆ ಆದನ್ನು ತಂದೆ-ತಾಯಿ, ಸ್ತ್ರೀ-ಪುರುಷ, ರಾಜ-ಪ್ರಜೆ, ಅಷ್ಟೇಕೆ–ಇಡೀ ಜಗತ್ತೇ ಎದುರಿಸಿದರೂ ನಾವು ನಡೆಸಬೇಕಾಗುವುದು. ಅದೇ ನಿಜವಾದ ಸತ್ಯಾಗ್ರಹ.

೩ ಇಷ್ಟು ವ್ಯಾಪಕವಾದ ಆಗ್ರಹದಲ್ಲಿ ಸ್ವಜನರು ಪರ ಜನರು, ಮಕ್ಕಳು ಮುದುಕರು, ಸ್ತ್ರೀಯರು ಪುರುಷರು, ಎಂಬ ಭೇದವು ಸಾಧ್ಯವಿಲ್ಲ. ಶಾರೀರಿಕ ಬಲವನ್ನು ಯಾರ ವಿರುದ್ಧವಾಗಿಯೂ ಉಪಯೋಗಿಸಬಾರದು. ಶರೀರದ ಬಲ ಒಂದನ್ನು ಬಿಟ್ಟರೆ ಉಳಿದುದು ಅಹಿಂಸೆಯ ಬಲ, ಪ್ರೇಮದ ಬಲ. ಈ ಬಲಕ್ಕೆ ಆತ್ಮಬಲವೆನ್ನುವರು.

೪ ಪ್ರೇಮದ ಬಲದಿಂದ ತನಗೇ ದುಃಖವಾಗುವುದು, ಅನ್ಯರಿಗಲ್ಲ. ಆದ್ದರಿಂದ ಸತ್ಯಾಗ್ರಹಿಯಲ್ಲಿ ಮರಣ ಪರ್ಯಂತರದ ಎಲ್ಲ ಕಷ್ಟಗಳನ್ನು ನಗುಮೊಗದಿಂದ ಸಹಿಸುವ ಶಕ್ತಿ ಇರಬೇಕು.

೫ ಪ್ರತಿಪಕ್ಷಿಯು ಬಹಳವಾಗಿ ವಿರೋಧಿಸುತ್ತಿದ್ದರೂ ಸತ್ಯಾಗ್ರಹಿಯು ಕಾಯಾ ವಾಚಾ ಮನಸಾ ಅವನ, ಅಥವಾ ಅವನ ಪಕ್ಷದ ಯಾವುದೆ ವ್ಯಕ್ತಿಯ ಅಹಿತವನ್ನು ಬಯಸುವುದೂ ಇಲ್ಲ, ಮಾಡುವುದೂ ಇಲ್ಲ. ಇಂತಹ ವಿಚಾರಗಳಿಂದಲೆ ಅಸಹಕಾರ, ಸವಿನಯ ಕ್ಯಾದೆಭಂಗ ಮೊದಲಾದುವು ಹುಟ್ಟುತ್ತವೆ.

೬ ಸತ್ಯಾಗ್ರಹದ ಈ ಉತ್ಪತ್ತಿಯನ್ನು ನೆನಪಿನಲ್ಲಿಟ್ಟವರಿಗೆ ಕೆಳಗಿನ ನಿಯಮಗಳು ಸುಲಭವಾಗಿ ತಿಳಿಯುವವು:

೧) ಸತ್ಯಾಗ್ರಹಿ ಯಾರೊಡನೆಯೂ ಕೋಪಿಸಿಕೊಳ್ಳುವುದಿಲ್ಲ.

೨) ವಿರೋಧಿಗಳ ಸಿಟ್ಟನ್ನು ಸಹಿಸುವನು.

೩) ತನ್ನ ಕೋಪವನ್ನು ಸಹಿಸುತ್ತ ವಿರೋಧಿಯ ಹೊಡೆತಗಳನ್ನೂ ಸಹಿಸುವನು. ಆದರೆ ಅವನಿಗೆ ತಿರುಗಿ ಹೊಡೆಯುವುದಿಲ್ಲ. ವಿರೋಧಿಯು ಸಿಟ್ಟಿನ ಭರದಲ್ಲಿ ಮಾಡಿದ ಯೋಗ್ಯವಾದ ಅಥವಾ ಅಯೋಗ್ಯವಾದ ಅಪ್ಪಣೆಯನ್ನು ಹೆದರಿಕೆಗಾಗಲಿ ಹೊಡೆತಗಳಿಗಾಗಲಿ ಒಪ್ಪಿ ಅವನಿಗೆ ವಶವಾಗುವುದಿಲ್ಲ.

೪) ಪೋಲೀಸರು ಹಿಡಿಯಲು ಬಂದರೆ ಸಂತೋಷದಿಂದ ಅವರ ವಶನಾಗುತ್ತಾನೆ. ತನ್ನ ವಸ್ತುಗಳ ಜಪ್ತಿಗೆ ಬಂದರೆ ಆದಕ್ಕೂ ಆಕ್ಷೇಪಿಸದೆ ಒಪ್ಪುತ್ತಾನೆ.

೫) ಎರಡನೆಯವರ ಆಸ್ತಿಯ ರಕ್ಷಣೆಯ ಹಕ್ಕು ಅವನಿಗಿರುವುದು. ಅದನ್ನು ಅವನು ಜೀವ ಹೋದರೂ ಬಿಟ್ಟುಕೊಡುವುದಿಲ್ಲ. ಅದನ್ನು ವಶಪಡಿಸಿಕೊಳ್ಳಲು ಬಂದವನನ್ನು ಹೊಡೆಯುವುದಿಲ್ಲ.

೬) ಹೊಡೆಯುವುದೂ ಇಲ್ಲ, ಎಂದರೆ ಬೈಯುವುದೂ ಇಲ್ಲ.

೭) ಸತ್ಯಾಗ್ರಹಿಯು ವಿರೋಧಿಯ ಮಾನ ಕಳೆಯುವುದಿಲ್ಲ. ಈಗ ದೇಶದಲ್ಲಿ ಆಗುತ್ತಿರುವ ಎಷ್ಟೋ ಜಯಘೋಷಗಳು ಹಿಂಸಾತ್ಮಕವಿರುವವು. ಸತ್ಯಾಗ್ರಹಿಯು ಅವನ್ನು ಬಿಟ್ಟುಬಿಡುವನು.

೮) ಸತ್ಯಾಗ್ರಹಿಯು ಬ್ರಿಟಿಷರ ಧ್ವಜಕ್ಕೆ ವಂದನೆ ಮಾಡುವುದಿಲ್ಲ. ಆದರೆ ಅವನು ಅದರ ಅಪಮಾನ ಮಾಡುವುದಿಲ್ಲ. ಅಧಿಕಾರಿಗಳ, ಇಂಗ್ಲಿಷ್ ಜನರ ಅಪಮಾನವನ್ನೂ ಮಾಡುವುದಿಲ್ಲ.

೯) ಸರಕಾರದೊಡನೆ ಹೋರಾಟ ನಡೆದಾಗ ಕೂಡ ಇಂಗ್ಲಿಷ್ ಜನರ, ಅಧಿಕಾರಿಗಳ ಅಪಮಾನವನ್ನು ಮಾಡಲು ಯಾರಾದರೂ ಬಂದರೆ, ಯಾರಾದರೂ ಹೊಡೆಯಬಂದರೆ ಸತ್ಯಾಗ್ರಹಿ ತನ್ನ ಜೀವದ ಹಂಗುದೊರೆದು ಅವರನ್ನು ರಕ್ಷಿಸುವನು.

**ಸೆರೆಮನೆಯ ವಿಷಯವಾಗಿ:**

೧೦) ಸತ್ಯಾಗ್ರಹಿಯು ಸೆರೆಮನೆಯಲ್ಲಿ ತನ್ನ ಮಾನಕ್ಕೆ ಕುಂದುಬಾರದ ಎಲ್ಲ ನಿಯಮಗಳನ್ನೂ ಪಾಲಿಸುವನು. ಅಧಿಕಾರಿಗಳೊಡನೆ ವಿವೇಕದಿಂದ,

ವಿನಯದಿಂದ ವರ್ತಿಸುವನು. ಉದಾಹರಣೆಗೆ: ಸತ್ಯಾಗ್ರಹಿಯು ಅಧಿಕಾರಿಗಳಿಗೆ ನಮಸ್ಕಾರ ಮಾಡುವನು. ಆದರೆ ನೆಲಕ್ಕೆ ಮೂಗು ತಿಕ್ಕುವ ಅಪ್ಪಣೆಯನ್ನು ಪಾಲಿಸಲಾರನು. 'ಸರಕಾರಕ್ಕೆ ಜಯವಾಗಲಿ' ಎನ್ನಲು ಹೇಳಿದರೆ, ಹಾಗೆ ಮಾಡಲಾರ. ಧರ್ಮದ ಕಟ್ಟು-ಕಟ್ಟಳೆಗಳಿಲ್ಲದಿದ್ದರೆ ಸೆರೆಮನೆಯ ಸ್ವಚ್ಛವಾದ ಆಹಾರವನ್ನು ತೆಗೆದುಕೊಳ್ಳುವನು. ಆದರೆ ಅಪಕ್ವ, ಕೊಳೆತ, ಹೊಲಸು ಪಾತ್ರೆಯಲ್ಲಿ ಬಡಿಸಿದ, ಅಪಮಾನ ಮಾಡುವ ಉದ್ದೇಶದಿಂದ ಕೊಟ್ಟ, ಆಹಾರ ತೆಗೆದುಕೊಳ್ಳುವುದಿಲ್ಲ.

೧೧) ಕೊಲೆಮಾಡಿ ಸೆರೆಮನೆಗೆ ಬಂದ ಕೈದಿಗಳ ನಡುವೆ, ಮತ್ತು ತನ್ನ ನಡುವೆ, ಸತ್ಯಾಗ್ರಹಿ ಭೇದ ಎಣಿಸುವುದಿಲ್ಲ. ಅವರಿಗಿಂತಲೂ ತಾನು ಉಚ್ಚ ನೆಂದು ತಿಳಿದುಕೊಂಡು, ಅಧಿಕಾರಿಗಳಿಗೆ ಹಾಗೆ ಹೇಳಿ, ತನಗೆ ಹೆಚ್ಚಿನ ಅನು ಕೂಲತೆಗಳನ್ನು ಕೇಳುವುದಿಲ್ಲ. ಶರೀರಕ್ಕೂ ಆತ್ಮಕ್ಕೂ ಅವಶ್ಯವಾಗಿ ಬೇಕಾಗುವ ವಸ್ತುಗಳನ್ನು ಕೇಳಲು ಎಲ್ಲರಿಗೂ ಅಧಿಕಾರವುಂಟು.

೧೨) ಯಾವ ಅನುಕೂಲತೆಗಳು ಸಿಕ್ಕದಿದ್ದರೆ ಮಾನಹಾನಿಯಾಗುವು ದಿಲ್ಲವೊ, ಅಂಥವು ಸಿಕ್ಕದಿದ್ದರೂ ಸತ್ಯಾಗ್ರಹಿ ಉಪವಾಸಾದಿಗಳನ್ನು ಮಾಡು ವುದಿಲ್ಲ.

ದಲದ ವಿಷಯವಾಗಿ:

೧೩) ತನ್ನ ಗುಂಪಿನ ಅಧಿಕಾರಿಯು ಹೊರಡಿಸಿದ ಅಪ್ಪಣೆಗಳು ತನ್ನ ಮನ-ಸ್ಸಿಗೆ ಬರಲಿ ಬರದಿರಲಿ, ಅವನ್ನು ಸತ್ಯಾಗ್ರಹಿ ಸಂತೋಷದಿಂದ ಪಾಲಿಸುವನು.

೧೪) ಅಪ್ಪಣೆ ಅಪಮಾನಕಾರಿಯಾದುದು, ದ್ವೇಷಯುಕ್ತವಾದುದು, ಮತ್ತು ಮೂರ್ಖತನದ್ದು ಎಂದೆನಿಸಿದರೂ ಅದನ್ನು ಮೊದಲು ಪಾಲಿಸಿ ಆ ಮೇಲೆ ಅದರ ಬಗ್ಗೆ ಮೇಲಿನ ಅಧಿಕಾರಿಗಳಿಗೆ ತಿಳಿಸುವನು. ದಲದಲ್ಲಿ ಸೇರುವ ಮೊದಲು ಆ ದಲವು ಯೋಗ್ಯವಿರುವುದೊ ಇಲ್ಲವೊ ಎಂದು ಯೋಚಿಸುವ ಹಕ್ಕು ಅವನಿಗಿದೆ. ಒಮ್ಮೆ ಸೇರಿದ ಬಳಿಕ ಅದರ ಕಹಿ ಸಿಹಿ ನಿಯಮಗಳನ್ನೆಲ್ಲ ಪಾಲಿಸುವುದು ಅವನ ಧರ್ಮ. ದಲದಲ್ಲಿದ್ದೂ ನಿಯಮಗಳನ್ನು ಮುರಿಯಲು ಅವನಿಗೆ ಅಧಿಕಾರವಿರುವುದಿಲ್ಲ.

೧೫) ತನ್ನನ್ನು ಅವಲಂಬಿಸಿಕೊಂಡಿರುವವರ ಹೊಟ್ಟೆಯ ಬಗ್ಗೆ ಸತ್ಯಾಗ್ರಹಿ ಯಾರಿಂದಲೂ ಏನೂ ಅಪೇಕ್ಷಿಸುವುದಿಲ್ಲ. ತನ್ನನ್ನು ಅವಲಂಬಿಸಿಕೊಂಡವರ

ಉದರ-ಪೋಷಣೆಯು ವ್ಯವಸ್ಥೆ ಆದರೆ ಅದು ಅನಪೇಕ್ಷಿತವಾಗಿ ಆದದ್ದೆಂದು ತಿಳಿಯುವನು. ತನ್ನ ಆಶ್ರಿತರನ್ನು ಈಶ್ವರನ ಚರಣದಲ್ಲಿ ಅರ್ಪಿಸುವನು. ಎಲ್ಲಿ ಶಾರೀರಿಕ ಬಲದ ಯುದ್ಧಗಳಾಗುವವೊ ಅಲ್ಲಿ ಸಾವಿರಾರು ಜನರು ಭಾಗವಹಿಸುವರು. ಅಂಥ ಕಡೆಗಳಲ್ಲಿ ಕೂಡ, ಯಾರೂ ಯಾರನ್ನೂ ಆಫಲಂಬಿಸಿಕೊಂಡಿರುವುದಿಲ್ಲ. ಎಂದ ಮೇಲೆ ಸತ್ಯಾಗ್ರಹೀ-ಯುದ್ಧದ ವಿಷಯ ಕೇಳಬೇಕಾದುದೇನು? ಇಂಥವರನ್ನು ಈಶ್ವರನು ಹಸಿವಿನಿಂದ ಬಳಲಿಸಿ ಕೊಲ್ಲುವುದಿಲ್ಲವೆಂಬುದು ಸರ್ವರಿಗೂ ಬಂದ ಅನುಭವ.

**ಜಾತಿ-ಜಾತಿಗಳ ನಡುವಿನ ಜಗಳದಲ್ಲಿ:**

೧೬) ಸತ್ಯಾಗ್ರಹಿಯು ಜಾತೀಯ ಜಗಳಕ್ಕೂ ತಿಕ್ಕಾಟಗಳಿಗೂ ತಿಳಿದೂ ತಿಳಿದೂ ಕಾರಣನಾಗುವುದಿಲ್ಲ.

೧೭) ಜಾತೀಯ ಜಗಳದಲ್ಲಿ ಸತ್ಯಾಗ್ರಹಿ ಯಾವ ಪಕ್ಷಕ್ಕೂ ಸೇರುವುದಿಲ್ಲ. ನ್ಯಾಯವಾದ ಪಕ್ಷಕ್ಕೆ ಅವನು ನೆರವಾಗುತ್ತಾನೆ. ತಾನು ಹಿಂದೂ ಧರ್ಮದವನಾಗಿದ್ದರೆ ಮುಸಲ್ಮಾನ್ ಮುಂತಾದ ಇತರ ಧರ್ಮೀಯರ ಬಗ್ಗೆ ಉದಾರವೃತ್ತಿಯನ್ನು ತೋರಿಸುತ್ತಾನೆ. ಹಿಂದೂಗಳು ಅನ್ಯ ಜಾತಿಗಳ ಮೇಲೆ ಆಕ್ರಮಣ ಮಾಡಿದರೆ ಅನ್ಯ ಜಾತಿಯವರನ್ನು ತನ್ನ ಜೀವದ ಹಂಗುದೊರೆದು ಕಾಪಾಡುತ್ತಾನೆ. ಹಿಂದೂಗಳ ಮೇಲೆ ಮುಸಲ್ಮಾನ್ ಮೊದಲಾದವರು ಆಕ್ರಮಣ ಮಾಡಿದರೆ ಹಿಂದೂಗಳನ್ನುಳಿಸಲು ಪ್ರಾಣವನ್ನಾದರೂ ಕೊಡುತ್ತಾನೆ. ಆದರೆ ಪ್ರತಿಯಾಗಿ ಹೊಡಿದ ಹೋರಾಟದಲ್ಲಿ ಎಂದೂ ಸೇರುವುದಿಲ್ಲ.

೧೮) ಜಾತೀಯ ಜಗಳಗಳಿಂದ ಆದಷ್ಟು ದೂರ ಇರಲು ಯತ್ನಿಸುತ್ತಾನೆ.

೧೯) ಸತ್ಯಾಗ್ರಹಿಯು ಯಾವ ಜಾತಿಯವರ ಮನಸ್ಸನ್ನೂ ನೋಯಿಸದಂತೆ ಮೆರವಣಿಗೆ ಹೊರಡಿಸಬೇಕು. ಮನಸ್ಸನ್ನು ನೋಯಿಸಬೇಕೆಂದು ಹೊರಡಿಸಿದ ಮೆರವಣಿಗೆಯಲ್ಲಿ ಸೇರಕೂಡದು.

## ೧೪ ಸತ್ಯಾಗ್ರಹಿಗೆ ಅವಶ್ಯವಿರುವ ಗುಣಗಳು

('ಹರಿಜನ ಬಂಧು'ವಿನಲ್ಲಿ ೧೯೩೯ರ ಮಾರ್ಚ್ ೨೬ರಂದು ಗಾಂಧೀಜಿ ಬರೆದುದು.)

೧ ಸತ್ಯಾಗ್ರಹಿಯು ಪರಮಾತ್ಮನಲ್ಲಿ ಸಂಪೂರ್ಣ, ಜೀವಂತ ಶ್ರದ್ಧೆಯುಳ್ಳವನಿರುವನು. ಪರಮಾತ್ಮನೇ ಸನಾತನವಾದ ಆಧಾರನು.

೨ ಧರ್ಮದಲ್ಲಿಟ್ಟಿರುವಷ್ಟು ಆಸ್ಥೆಯನ್ನು ಸತ್ಯಾಗ್ರಹಿ ಸತ್ಯ ಅಹಿಂಸೆಗಳಲ್ಲಿಯೂ ಇಟ್ಟಿರುವನು. ಆದುದರಿಂದ ಮನುಷ್ಯನಲ್ಲಿರುವ ಸ್ವಾಭಾವಿಕ ಒಳ್ಳೆ-ತನದಲ್ಲಿ ಅವನ ವಿಶ್ವಾಸವಿರುವುದು. ಈ ಒಳ್ಳೆತನವನ್ನು ಜಾಗ್ರತಗೊಳಿಸಲು ಅವನು ಯಾವಾಗಲೂ ಹೆಣಗುವನು. ಈ ಪ್ರಯತ್ನವನ್ನು ಸತ್ಯದ, ಪ್ರೇಮದ ಮಾರ್ಗದಿಂದಲೆ ನಡೆಸುವನು. ಹಾಗೆ ಮಾಡುವಾಗ ಬಂದ ಕಷ್ಟ ನಷ್ಟಗಳನ್ನೆಲ್ಲ ತಾಳ್ಮೆಯಿಂದ ಸಹಿಸುವನು.

೩ ಅವನ ಜೀವನ-ಕ್ರಮವು ಯಾವಾಗಲೂ ಶುದ್ಧವಿರಬೇಕು. ತನ್ನ ಕಾರ್ಯಕ್ಕಾಗಿ ಸರ್ವಸ್ವವನ್ನೂ ಆನಂದದಿಂದ ಬಲಿಕೊಡಲು ಅವನು ಸಿದ್ಧನಿರಬೇಕು.

೪ ಅವನು ಸತತವಾಗಿ ಖಾದೀಧಾರಿಯಾಗಿದ್ದು ನೂಲುತ್ತಿರಬೇಕು. ಹಿಂದೀ ಜನರಿಗೆ ಇದು ಅವಶ್ಯ.

೫ ಅವನು ನಿರ್ವ್ಯಸನಿಯೂ ಮಾದಕ ಪದಾರ್ಥಗಳನ್ನು ಬಿಟ್ಟವನೂ ಇರಬೇಕು. ಇದರಿಂದ ಅವನ ಮನಸ್ಸು ನಿರ್ಮಲವೂ ನಿಶ್ಚಲವೂ ಇರಬಲ್ಲುದು.

೬ ಕಾಲ ಕಾಲಕ್ಕೆ ಮಾಡಲಾದ ಶಿಸ್ತಿನ ನಿಯಮಗಳನ್ನು ಅವನು ಸ್ವ-ಸಂತೋಷದಿಂದಲೂ ಬಿಡದೆಯೂ ಪಾಲಿಸುವನು.

೭ ಸಾಮಾನ್ಯವಾಗಿ, ಸೆರೆಮನೆಯ ನಿಯಮಗಳನ್ನು ಅವನು ಪಾಲಿಸುವನು. ಆದರೆ ಮಾನಭಂಗವಾಗುವಂಥವುಗಳನ್ನು ಮುರಿಯುವನು.

## ೧೫ ಸಾಮುದಾಯಿಕ ಕ್ಕಾದೆಭಂಗ

೧ ಯಾವುದೇ ಸ್ಥಾನದಲ್ಲಿ ಸಾಮುದಾಯಿಕ ಸತ್ಯಾಗ್ರಹವನ್ನು ಹೂಡಬೇಕಾದರೆ ಕೆಳಗೆ ತೋರಿಸಿದ ಅನುಕೂಲ ಪರಿಸ್ಥಿತಿ ಬೇಕು. ಇಲ್ಲದಿದ್ದರೆ ಹಿಂಸೆ, ಪರಸ್ಪರ ವೈರಭಾವ, ಒತ್ತಾಯ, ಮತ್ತು ದಮನ-ನೀತಿಯ ಮೂಲಕ ಉಂಟಾಗುವ ಭಯ-ಭೀತಿ ಮುಂತಾದುವುಗಳ ಪ್ರಾದುರ್ಭಾವವಾಗುವ ಸಂಭವವಿದೆ.

೨ ಸತ್ಯಾಗ್ರಹವನ್ನು ಯೋಜಿಸುವ ಮುಂದಾಳುಗಳಲ್ಲಿ ಒಮ್ಮನಸ್ಸು, ಪರಸ್ಪರರಲ್ಲಿ ವಿಶ್ವಾಸ ಅವಶ್ಯ. ಪರಸ್ಪರರ ನಡತೆಯಲ್ಲಿ ಸಂಶಯ, ಮುಂದಾಳುಗಳ ಧೋರಣೆಯ ಬಗ್ಗೆ ಅನುಯಾಯಿಗಳಲ್ಲಿ ಅವಿಶ್ವಾಸ, ಅರೆವಿಶ್ವಾಸ ಕಂಡು ಬಂದರೆ ಅದು ಪ್ರತಿಕೂಲ ಪರಿಸ್ಥಿತಿ ಎಂದು ತಿಳಿಯಬೇಕು.

೩ ಸತ್ಯಾಗ್ರಹವನ್ನು ಯೋಜಿಸುವ ಮುಂದಾಳುಗಳು ಬೇರೆ ಬೇರೆ ರಾಜಕೀಯ ವಿಚಾರದವರಾದರೆ ಆ ಆ ಸತ್ಯಾಗ್ರಹದ ತಾತ್ಕಾಲಿಕ ಉದ್ದೇಶವನ್ನು ಕುರಿತು ಎಲ್ಲರಲ್ಲೂ ಸ್ಪಷ್ಟ ತಿಳಿವಳಿಕೆ ಇರಬೇಕು. ಸತ್ಯಾಗ್ರಹ ನಡೆಯುತ್ತಿರುವ ವರೆಗೆ, ಮತಭೇದಗಳುಳ್ಳ ರಾಜಕೀಯ ವಾದ-ವಿವಾದಗಳನ್ನು ನಿಲ್ಲಿಸಬೇಕೆಂಬ ಬಗ್ಗೆ ಎಲ್ಲರಲ್ಲಿ ಒಮ್ಮತವಿರಬೇಕು.

೪ ಮುಂದಾಳುಗಳು ಸೂಚಿಸಿದ ಕ್ರಮಗಳನ್ನು ಸ್ವಸಂತೋಷದಿಂದಲೂ ಜಿಗುಟುತನದಿಂದಲೂ ಪಾಲಿಸುವಷ್ಟು ವಿಶ್ವಾಸವನ್ನು ಆ ಆ ಅನುಯಾಯಿಗಳು ಮುಂದಾಳುಗಳಲ್ಲಿ ಇಟ್ಟಿರಬೇಕು. ಇಂತಹ ಕೆಲಸವನ್ನು ಮಾಡಬೇಡಿರಿ ಎಂದು ಹೇಳಿದ್ದನ್ನು ಕೇಳುವಷ್ಟು ಆ ಆ ಅನುಯಾಯಿಗಳ ಮೇಲೆ ಮುಂದಾಳುಗಳ ವರ್ಚಸ್ಸು ಇರಲೇ ಬೇಕು.

೫ ವಿರೋಧಿಪಕ್ಷಗಳು ಹೊರಿಸಬಹುದಾದ ಯಾವುದೇ ದೋಷಾರೋಪಗಳನ್ನು ನಂಬದಷ್ಟು ವಿಶ್ವಾಸವನ್ನು ಅನುಯಾಯಿಗಳು ಮುಂದಾಳುಗಳಲ್ಲಿ ಇಟ್ಟಿರಬೇಕು. ಅಂಥ ಯಾವ ದೋಷಾರೋಪಗಳಿಂದಲೂ ಅನುಯಾಯಿಗಳಲ್ಲಿ ಬುದ್ಧಿಭೇದವಾಗಕೂಡದು.

೬ ಸ್ವರಾಜ್ಯದ ಬಗ್ಗೆ ಇಲ್ಲವೆ ಹೊಣೆಗಾರ ರಾಜ್ಯಪದ್ಧತಿಯ ಬಗ್ಗೆ ಸತ್ಯಾಗ್ರಹ ಹೂಡುವುದಾದರೆ, ತತ್ಪೂರ್ವದಲ್ಲಿ ಜಾತಿ ಜಾತಿಗಳ ಪ್ರಶ್ನೆಗಳನ್ನು ಆದಷ್ಟು ಮಟ್ಟಿಗೆ ಬಿಡಿಸಿರುವುದು ಅವಶ್ಯ. ಆ ಪ್ರಶ್ನೆಗಳನ್ನೆತ್ತಿ ಒಡಕು ಹುಟ್ಟಿಸಲು ವಿರೋಧಿಪಕ್ಷಕ್ಕೆ ಅವಕಾಶವಿರಕೂಡದು. (ಈ ಬಗ್ಗೆ ಈಗ ಗಾಂಧೀಜಿಯವರ ಮತವು ಹೀಗಿದೆ: ಪರಕೀಯ ಸತ್ತೆ ಇಲ್ಲಿರುವ ವರೆಗೆ ಜಾತಿ ಜಾತಿಗಳ ಪ್ರಶ್ನೆ ಬಿಡುವುದು ದುಸ್ಸಾಧ್ಯ. ಆದ್ದರಿಂದ ಸತ್ಯಾಗ್ರಹ ಹೂಡದಿರಲು ಅದು ಕಾರಣವಾಗಲಾರದು. –ಸಂಪಾದಕ)

೭ 'ಸತ್ಯಾಗ್ರಹಿಗೆ ಆವಶ್ಯವಿರುವ ಗುಣಗಳು' ಎಂಬ ಪ್ರಕರಣದಲ್ಲಿ ಹೇಳಿದ ಮಾತುಗಳಲ್ಲಿ ವಿಶ್ವಾಸವಿದ್ದರೂ ಅವುಗಳನ್ನು ಕೂಡಲೆ ಪೂರೈಸುವ ಸಾಮರ್ಥ್ಯವಿಲ್ಲದಿದ್ದವರು ಸತ್ಯಾಗ್ರಹದ ತೀವ್ರ ಹೊಣೆಗಾರ ಕಾರ್ಯಕ್ರಮಗಳಲ್ಲಿ ಸೇರಬಾರದು. ಆದರೆ ಅವರು ರಚನಾತ್ಮಕ ಕಾರ್ಯವನ್ನು ಚನ್ನಾಗಿ ನಡೆಸಬೇಕು, ಅದರ ಹೊಣೆ ಹೊರಬೇಕು. ಜನರು ಅದಕ್ಕೆ ಪೂರ್ಣ ಬೆಂಬಲ ಕೊಡಬೇಕು.

೮ ಸತ್ಯ ಅಹಿಂಸೆಗಳ ಮುಖಾಂತರ ಸ್ವರಾಜ್ಯ ದೊರಕಿಸಲು ಜಾತಿ ಜಾತಿಗಳ ಐಕ್ಯ, ಅಸ್ಪೃಶ್ಯತಾನಿವಾರಣೆ, ವ್ಯಾಪಕ ಖಾದೀ ಪ್ರಚಾರ, ಮದ್ಯ

ಮಾದಕ ಪದಾರ್ಥಗಳ ಪ್ರತಿಬಂಧ, ಮುಂತಾದುವುಗಳ ಬಗ್ಗೆ ಜನಸಾಮಾನ್ಯರ ದೊಡ್ಡ ಬಹುಮತವು ಅವಶ್ಯ. ಹಾಗೆಯೇ, ಸತ್ಯಾಗ್ರಹ-ಮಾರ್ಗದ ಬಗ್ಗೆ ಸಹಾನುಭೂತಿ ಇದ್ದವರಲ್ಲಿ ಪೂರ್ಣ ಒಮ್ಮತವೂ ಅವಶ್ಯ. ಹೀಗಿರದಿದ್ದರೆ ಸಾಮುದಾಯಿಕ ಸತ್ಯಾಗ್ರಹಕ್ಕೆ ಅನುಕೂಲ ಪರಿಸ್ಥಿತಿ ಇದೆ ಎಂದು ಹೇಳಲಿಕ್ಕಾಗದು. ಆ ವರೆಗೆ ನಿಜವಾದ ಸ್ವರಾಜ್ಯವು ಅಶಕ್ಯಪ್ರಾಯವೇ ಸರಿ.

೯ ಸತ್ಯಾಗ್ರಹದ ಯಾವುದೇ ಹೋರಾಟವನ್ನು ಹೂಡುವ ಮೊದಲೂ, ಹಾಗೆಯೇ, ಅದು ನಡೆದಿರುವಾಗಲೂ ವಿರೋಧಿ ಪಕ್ಷ, ವಿರೋಧಿ ಸಂಸ್ಥೆ, ಇಲ್ಲವೆ ಅಧಿಕಾರಿಗಳನ್ನು ಕುರಿತು ಜನಸಾಮಾನ್ಯರಲ್ಲಿ ತಿರಸ್ಕಾರ-ಭಾವನೆ ಇರಕೂಡದು. ಅಂಥ ಭಾವನೆ ಉಂಟಾಗುವಂಥ ಭಾಷೆಯನ್ನು ಉಪಯೋಗಿಸಕೂಡದು. ಅಂಥ ಭಾಷೆ ಉಪಯೋಗಿಸುವಂಥ ಪ್ರಚಾರಕರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಸಾಧ್ಯವಾಗದಿದ್ದರೆ ಸತ್ಯಾಗ್ರಹಕ್ಕೆ ಪರಿಸ್ಥಿತಿ ಅನುಕೂಲವಿಲ್ಲ ಎಂದು ತಿಳಿಯಬೇಕು.

೧೦ ಸತ್ಯಾಗ್ರಹಕ್ಕೆ ಗುಪ್ತ ವ್ಯವಸ್ಥೆ ಅವಶ್ಯವಿಲ್ಲ ಎಂಬ ವಿಶ್ವಾಸವಿಲ್ಲದಿದ್ದರೆ ಅದು ಅನುಕೂಲ ಸ್ಥಿತಿಯಲ್ಲ ಎಂದು ತಿಳಿಯಬೇಕು.

೧೧ ಪರಿಸ್ಥಿತಿ ಅನುಕೂಲವಾಗುವ ವರೆಗೆ ಚತುರ್ವಿಧ (ಈಗ ಚತುರ್ದಶ ವಿಧ. –ಸಂಪಾದಕ) ರಚನಾತ್ಮಕ ಕಾರ್ಯಕ್ರಮಗಳನ್ನೂ ಲೋಕಸೇವೆಯ ಇತರ ಕಾರ್ಯಕ್ರಮಗಳನ್ನೂ ಮಾಡುತ್ತಿರುವುದೇ ಸ್ವರಾಜ್ಯದ ಸಾಧನೆ ಎನ್ನಿಸುವುದು. ಇಂಥ ಸಾಧನೆಯನ್ನು ವರ್ಷಾನುವರುಷ ಮಾಡುವ ಸಂದರ್ಭ ಬಂದರೂ ಅದರಲ್ಲಿ ಹಾನಿ ಏನೂ ಇಲ್ಲ. ಅದು ಪ್ರಗತಿಯೇ ಸರಿ. ಅದು ತುಚ್ಛ ಪ್ರಗತಿಯಲ್ಲ.

ಪಂಚಮ ಖಂಡ

# ಸ್ವರಾಜ್ಯ

—•—

## ೧ ರಾಮರಾಜ್ಯ

೧ ರಾಮರಾಜ್ಯವೇ ಸ್ವರಾಜ್ಯದ ಆದರ್ಶ. ರಾಮರಾಜ್ಯವೆಂದರೆ ಧರ್ಮದ ರಾಜ್ಯ, ಅಥವಾ ನ್ಯಾಯದ, ಪ್ರೇಮದ ರಾಜ್ಯ. ಅದಕ್ಕೆ ಅಹಿಂಸಕ ಸ್ವರಾಜ್ಯ,

ಜನತೆಯ ಸ್ವರಾಜ್ಯ, ಎನ್ನಲೂ ಬಹುದು.

೨ ಜನರ ಸ್ವರಾಜ್ಯವೆಂದರೆ, ಪ್ರತಿಯೊಂದು ವ್ಯಕ್ತಿಯ ಸ್ವರಾಜ್ಯದ ಮೂಲಕ ಉಂಟಾದ ಪ್ರಜಾಸತ್ತಾತ್ಮಕ್ಷ ರಾಜ್ಯ. ಪ್ರತಿಯೊಬ್ಬ ವ್ಯಕ್ತಿ ತನ್ನ ನಾಗರಿಕ-ಧರ್ಮದ ಪರಿಪಾಲನೆ ಮಾಡುವುದರಿಂದ ಈ ಬಗೆಯ ರಾಜ್ಯ-ನಿರ್ಮಾಣ ವಾಗುವುದು.

೩ (ಅ) ಈ ಬಗೆಯ ಸ್ವರಾಜ್ಯದಲ್ಲಿ ಯಾವನಿಗೂ ತನ್ನ ಅಧಿಕಾರದ ಅಹಂಕಾರಪೂರ್ವಕ ಅರಿವು ಎಂಬುದಿಲ್ಲ. ಅವಶ್ಯವಿದ್ದಾಗ ಆ ಆ ಅಧಿಕಾರವು ಅವನ ಕಡೆಗೆ ಬಂದೇ ಬರುವುದು. ಜನರು ಈ ರಾಜ್ಯದಲ್ಲಿ ತಮ್ಮ ಹಕ್ಕುಗಳನ್ನು ತಿಳಿದುಕೊಳ್ಳುವ ಅವಶ್ಯಕತೆ ಇಲ್ಲ. ಆದರೆ ಎಲ್ಲರೂ ತಮ್ಮ ತಮ್ಮ ಧರ್ಮ ವನ್ನೂ ಕರ್ತವ್ಯವನ್ನೂ ತಿಳಿದುಕೊಳ್ಳಲೇಬೇಕು. ಪ್ರತಿಯೊಂದು ಕರ್ತವ್ಯ ಪಾಲನೆಯ ಫಲವಾಗಿಯೂ ಯಾವುದೊಂದು ಹಕ್ಕು ತನ್ನಿಂದ ತಾನೆ ಸಿಗು ವುದು. ಕರ್ತವ್ಯ-ಪಾಲನೆಯ ಮೂಲಕ ಸಿಕ್ಕ ಹಕ್ಕು ಅಧಿಕಾರಗಳೇ ನಿಜವಾದ ಹಕ್ಕು ಅಧಿಕಾರಗಳು.

(ಆ) ಸೇವಾಧರ್ಮವನ್ನು (ಲೋಕ ಸೇವೆ) ಪಾಲಿಸುವವನಿಗೆ ಮಾತ್ರ ನಾಗರಿಕತನದ ನಿಜವಾದ ಹಕ್ಕುಗಳು ಪ್ರಾಪ್ತವಾಗುವವು, ದಕ್ಕುವವು.

(ಇ) ಹಾಗೆಯೇ, ಸತ್ಯವನ್ನೂ ಅಹಿಂಸಾಧರ್ಮವನ್ನೂ ಪಾಲಿಸುವವರಿಗೆ ಮಾತ್ರ ಪ್ರತಿಷ್ಠೆಯೂ, ಆ ಮೂಲಕ ಅಧಿಕಾರಗಳೂ ದೊರಕುವವು. ಅಂಥ ವರು ತಮ್ಮ ಅಧಿಕಾರಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸದೆ ಸೇವೆಗಾಗಿಯೇ ಉಪಯೋಗಿಸುವರು.

೪ ರಾಮರಾಜ್ಯದಲ್ಲಿ ಒಂದು ಕಡೆ ಅಪಾರವಾದ ಸಂಪತ್ತು ರಾಶಿ ರಾಶಿ ಯಾಗಿ ಬಿದ್ದಿರುವುದೂ ಇಲ್ಲ; ಇನ್ನೊಂದು ಕಡೆ ದೈನ್ಯದಿಂದ, ಹಸಿವಿನಿಂದ ಸಾಯುವುದೂ ಇಲ್ಲ. ಅಲ್ಲಿ ಯಾವನೂ ಹೊಟ್ಟೆಗೆ ಕೂಳಿಲ್ಲದೆ ಸಾಯುವುದಿಲ್ಲ. ಆ ರಾಜ್ಯವು ನಿಂತಿರುವುದು ಪಶು-ಬಲದ ಆಧಾರದಿಂದಲ್ಲ – ಜನರ ಪ್ರೀತಿಯ ಮೇಲೆ, ಜನರು ಜ್ಞಾನಪೂರ್ವಕವಾಗಿಯೂ ಸ್ವೇಚ್ಛೆಯಿಂದಲೂ ನಿರ್ಭಯ ವಾಗಿಯೂ ಮಾಡುವ ಸಹಕಾರದ ಅಡಿಗಲ್ಲಿನ ಮೇಲೆ.

೫ ರಾಮರಾಜ್ಯದಲ್ಲಿ ಬಹುಸಂಖ್ಯಾಕರಾಗಲಿ, ಬಹುಸಂಖ್ಯ ಜಾತಿಯುವ ರಾಗಲಿ, ಅಲ್ಪಸಂಖ್ಯಾಕರನ್ನೂ ಅಲ್ಪಸಂಖ್ಯಜಾತಿಯುವರನ್ನೂ ಕುಗ್ಗಬಡೆ ಯುವುದಿಲ್ಲ. ಅಲ್ಪಸಂಖ್ಯಾಕರೂ ಬಹುಸಂಖ್ಯಾಕರಂತೆಯೇ ಸ್ವಾತಂತ್ರ್ಯ

ಸುಖವನ್ನು ಅನುಭವಿಸುವರು. ಬಹುಸಂಖ್ಯ ಜಾತಿಯವರು ಅಲ್ಪ ಸಂಖ್ಯ ಜಾತಿಯವರ ಹಿತಸಾಧನೆಯೇ ತಮ್ಮ ಕರ್ತವ್ಯವೆಂದು ತಿಳಿದುಕೊಳ್ಳುವರು.

೬ ರಾಮರಾಜ್ಯವು ಕೋಟಿಗಟ್ಟಲೆ ಜನರ ಸಲುವಾಗಿಯೂ ಸುಖದ ಸಲುವಾಗಿಯೂ ನಡೆಯತಕ್ಕ ರಾಜ್ಯ. ಪ್ರಜರ ನಿಜವಾದ ಸೇವಕನಿಗೇ ಆ ರಾಜ್ಯ-ಕಾರಭಾರದಲ್ಲಿ ಮುಖ್ಯ ಅಧಿಕಾರಪದವು ಸಿಕ್ಕುವುದು. ಅವನಿಗೆ ರಾಜನೆನ್ನಬಹುದು, ಅಧ್ಯಕ್ಷನೆನ್ನಬಹುದು, ಅಥವಾ ಮತ್ತಾವ ಹೆಸರಿನಿಂದಲೂ ಕರೆಯಬಹುದು. ಅವನು ಪ್ರಜರ ಸೇವಕನಾದ್ದರಿಂದಲೆ ಆ ಸ್ಥಾನವನ್ನು ಪಡೆಯುವನು. ಪ್ರಜರ ಪ್ರೀತಿಪಾತ್ರನಾಗಿದ್ದರೆ ಮಾತ್ರ ಆ ಅಧಿಕಾರ-ಸ್ಥಳದಲ್ಲಿ ಉಳಿಯುವನು; ಅವರ ಕಲ್ಯಾಣಕ್ಕಾಗಿಯೆ ಪ್ರಯತ್ನಿಸುವನು. ಅವನು ಪ್ರಜರ ಧನವನ್ನು ದುಂದುಗಾರಿಕೆಯಿಂದ ಹಾಳುಮಾಡುವವನಾಗಲಾರ. ಅಧಿಕಾರ ಬಲದಿಂದ ಪ್ರಜರನ್ನು ಪೀಡಿಸುವವನೂ ಆಗಲಾರ. ಅವನು ರಾಜನೆಂದು ಕರೆಯಲ್ಪಡುತ್ತಿದ್ದರೂ ಇರುವುದು ಯತಿಯಂತೆ

೭ ರಾಮರಾಜ್ಯದಲ್ಲಿ ಆಳಿಕೆ ಎಂಬುದು ತೀರ ಕಡಮೆ. ಜನರು ತಾವೇ ಸೇರಿಕೊಂಡು ರಾಜ್ಯಕಾರಭಾರವನ್ನು ತಾವೇ ಹೆಚ್ಚಾಗಿ ನಡೆಸಿಕೊಳ್ಳುತ್ತಿರುವರು. ಜನರಿಗೆ ಶಿಕ್ಷೆಯ ಭಯವನ್ನು ತೋರಿಸಿ ಕಟ್ಟಳೆಗಳನ್ನು ಪಾಲಿಸಲು ಒತ್ತಾಯಪಡಿಸುವ ಕ್ರಮವು ಅಲ್ಲಿರಬಾರದು. ಪ್ರಜರು ತಮ್ಮಲ್ಲಿ ಸುಧಾರಣೆಗಳನ್ನು ಮಾಡಿಕೊಳ್ಳುವುದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳ, ಅಧಿಕಾರಿಗಳ ಸಹಾಯವನ್ನು ಕೋರುತ್ತ ಕುಳಿತುಕೊಳ್ಳುವುದಿಲ್ಲ. ಜನರು ತಾವಾಗಿ ಮಾಡಿಕೊಂಡ ಸುಧಾರಣೆಗಳಿಗೆ ಅನುಕೂಲವಾಗುವಂತಹ ಕ್ಯಾದೆಗಳನ್ನು ತಿದ್ದುವುದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳು ಯತ್ನಿಸುವವು; ವ್ಯವಸ್ಥೆಯನ್ನು ಸರಿಯಾಗಿ ಇಡುವುದಕ್ಕಾಗಿ ಅಧಿಕಾರಿಗಳು ಹೆಣಗುವರು.

೮ ರಾಮರಾಜ್ಯದಲ್ಲಿ ಒಕ್ಕಲುತನವು ಸುಸ್ಥಿತಿಯಲ್ಲಿರುವುದು. ಇತರ ಉದ್ಯೋಗಗಳು ಇದನ್ನವಲಂಬಿಸಿಕೊಂಡೇ ನಡೆಯುತ್ತಿರುವವು. ಅನ್ನ ವಸ್ತ್ರಗಳ ವಿಷಯದಲ್ಲಿ ಪ್ರಜರು ಸ್ವತಂತ್ರರಿರುವರು. ಹೋರಿ-ಹಸುಗಳ ಸ್ಥಿತಿ ಸಾಕಷ್ಟು ಚನ್ನಾಗಿರುವುದರಿಂದ ಆದರ್ಶ ಗೋರಕ್ಷಣೆ ಅಲ್ಲಿ ಆಗುತ್ತಿರುವುದು.

೯ ರಾಮರಾಜ್ಯದಲ್ಲಿ ಸರ್ವಧರ್ಮಗಳೂ ವರ್ಣಗಳೂ ವರ್ಗಗಳೂ ಸಮಭಾವನೆಯಿಂದಲೂ ಸಖ್ಯಭಾವದಿಂದಲೂ ಇರುವವು. ಧಾರ್ಮಿಕ ಜಗಳ, ಕೀಳುತರದ ಸ್ಪರ್ಧೆ, ವಿರೋಧವನ್ನು ಬೆಳೆಸುವಂತಹ ಸ್ವಾರ್ಥ, ಅಲ್ಲಿ ಕಾಣಬರುವುದಿಲ್ಲ.

೧೦ ರಾಮರಾಜ್ಯದಲ್ಲಿ ಸ್ತ್ರೀಯರ ಮಟ್ಟವು ಪುರುಷರ ಮಟ್ಟದಷ್ಟೇ ಉಚ್ಚ ವಾಗಿರುವುದು.

೧೧ ರಾಮರಾಜ್ಯದಲ್ಲಿ ಯಾವನೂ ತನ್ನ ಸಿರಿವಂತಿಕೆಯ ಮೂಲಕವಾಗಲಿ ಸೋಮಾರಿತನದ ಮೂಲಕವಾಗಲಿ ನಿರುದ್ಯೋಗಿಯಾಗಿರುವುದಿಲ್ಲ. ಪರಿಶ್ರಮ ಜೀವಿಯಾದ ಯಾವನೂ ಹಸಿವಿನಿಂದ ಸಾಯಲಾರನು. ಅನುದ್ಯೋಗದ ಮೂಲಕ ಸೋಮಾರಿಯಾಗುವಂತಹ ಸಂದರ್ಭವು ಅಲ್ಲಿ ಬರುವುದೇ ಇಲ್ಲ.

೧೨ ರಾಮರಾಜ್ಯದಲ್ಲಿ ಗೃಹ-ಕಲಹವುಂಟಾಗುವುದಿಲ್ಲ. ಅದರಂತೆ, ಪರ ರಾಜ್ಯದೊಡನೆ ಯುದ್ಧವೂ ಆಗುವುದಿಲ್ಲ. ಅದರಲ್ಲಿ ಪರರ ರಾಜ್ಯಗಳನ್ನು ಅಪ ಹರಿಸುವಂಥ, ಗೆಲ್ಲುವಂಥ, ಆ ರಾಜ್ಯಗಳ ವ್ಯಾಪಾರ ಉದ್ಯೋಗಗಳನ್ನು ನೀತಿ ಯನ್ನು ನಾಶಪಡಿಸುವಂಥ ರಾಜಕೀಯಕ್ಕೆ ಎಡೆಯಿರುವುದಿಲ್ಲ. ಆ ರಾಜ್ಯವು ಇತರರೊಡನೆ ಮಿತ್ರಭಾವದಿಂದಲೆ ವರ್ತಿಸುವುದು.

೧೩ ಆದ್ದರಿಂದ ರಾಮರಾಜ್ಯದಲ್ಲಿ ಸೈನ್ಯದ ವೆಚ್ಚವು ತೀರ ಕಡಮೆ.

೧೪ ರಾಮರಾಜ್ಯದ ಪ್ರಜರು ಬರಿಯ ಓದು-ಬರಹ ಬಲ್ಲವರಿರದೆ ನಿಜ ವಾದ ಶಿಕ್ಷಣವನ್ನು ಪಡೆದವರಾಗಿರುವರು; ಎಂದರೆ ಅವರಿಗೆ ಮುಕ್ತಿಯನ್ನು ಕೊಡುವಂತಹ, ಮತ್ತು ಮುಕ್ತಾವಸ್ಥೆಯಲ್ಲಿ ಸ್ಥಿರವಾಗಿರಲು ಬರುವಂತಹ ಶಿಕ್ಷಣವು ಸಿಕ್ಕುತ್ತಿರುವುದು.

೧೫ ರಾಮರಾಜ್ಯವೆಂಬುದು ಬರೀ ಒಂದು ದೇಶದ ಸಲುವಾಗಿ, ಪ್ರಜೆಗಳ ಸಲುವಾಗಿ, ಆದರ್ಶಭೂತವಾದ ರಾಜ್ಯವಲ್ಲ. ಅದು ಇಡೀ ಜಗತ್ತಿನ ಆದರ್ಶ. ರಾಮರಾಜ್ಯವು ಒಂದೇ ಒಂದೆಡೆಯಲ್ಲಿ ಸ್ಥಾಪಿತವಾದರೂ ಅದರ ವರ್ಚಸ್ಸು ಎಲ್ಲೆಲ್ಲಿಯೂ ಕಾಣುವುದು.

೧೬ ಈ ಸ್ಥಿತಿಯು ಒದಗಿತೆಂದರೆ ರಾಜ್ಯ ರಾಜ್ಯಗಳ ನಡುವೆ ಜಗಳದ ಕಾರಣವೇ ಉಳಿಯದು. ಅರ್ಥಾತ್ ಯುದ್ಧವೆಂಬ ವಸ್ತುವೇ ನಾಮಶೇಷ ವಾಗುವುದು. ಎಲ್ಲ ಬಗೆಯ ಮತಭೇದಗಳು, ಜಗಳಗಳು, ವಿರೋಧಗಳು, ಅಹಿಂಸೆಯ ಮೂಲಕವೇ ಕೊನೆಗೊಳ್ಳುವವು.

## ೨ ತಂತ್ರ-ಸುಧಾರಣೆ ಮತ್ತು ರಾಜ್ಯ-ಶಾಸನ ಸುಧಾರಣೆ

೧ ತಂತ್ರಸುಧಾರಣೆಯ ಮತ್ತು ರಾಜ್ಯಶಾಸನ ಸುಧಾರಣೆಯ ಪ್ರಶ್ನೆಯು ಒಂದೇ ಅಲ್ಲ.

೨ ಅಧಿಕಾರದ ಉಪಯೋಗವನ್ನು ಮಾಡುವಂಥವರು ಪ್ರಜೆಗಳೊಡನೆ ನಡೆದುಕೊಳ್ಳುವ ಮನೋವೃತ್ತಿಯಲ್ಲಿ ಸಂಪೂರ್ಣ ಸುಧಾರಣೆ ಮಾಡುವುದೇ ತಂತ್ರ-ಸುಧಾರಣೆ ಎನಿಸುವುದು.

೩ ರಾಜ್ಯ-ಶಾಸನ ಸುಧಾರಣೆಯೆಂದರೆ ಕಟ್ಟಳೆಗಳನ್ನು ಮಾಡುವುದಕ್ಕಾಗಿಯೂ ರಾಜ್ಯದ ಬೇರೆ ಬೇರೆ ಖಾತೆಗಳ ಮೇಲ್ವಿಚಾರಣೆಯನ್ನು ನಡೆಸುವುದಕ್ಕಾಗಿಯೂ ಆ ಆ ಖಾತೆಗಳ ನೀತಿಯನ್ನು ನಿಶ್ಚಯಿಸುವುದಕ್ಕಾಗಿಯೂ ಎಷ್ಟು ಜನರು ಎಲ್ಲಿ ಸೇರಬೇಕು, ಅವರು ಯಾವ ರೀತಿ ವಿಷಯಗಳನ್ನು ಚರ್ಚಿಸಬೇಕು, ಅವರನ್ನು ಯಾವ ರೀತಿಯಿಂದ ಈ ಕಾರ್ಯಕ್ಕಾಗಿ ನಿಯಮಿಸಬೇಕು, ಮುಂತಾದ ವಿಷಯಗಳ ವಿಚಾರ.

೪ ಸದ್ಯಕ್ಕೆ ಅವಶ್ಯಕ್ಕಿಂತ ಹೆಚ್ಚು ಮಹತ್ವವು ರಾಜ್ಯಶಾಸನದ ಪ್ರಶ್ನೆಗೆ ಕೊಡಲ್ಪಟ್ಟಿರುವುದು. ಇದರಿಂದ ನಾವು ಮೂಲ ವಿಷಯವನ್ನು ಮರೆತುಬಿಟ್ಟಿದ್ದೇವೆ. ರಾಜ್ಯದ ಬಾಹ್ಯರೂಪಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಅದರ ಯೋಚನೆಯಲ್ಲೇ ತೊಡಗಿದ್ದೇವೆ.

೫ ರಾಜ್ಯಶಾಸನದ ಗಹನವಿಚಾರಗಳೂ ಅದರ ಭಿನ್ನ-ಭಿನ್ನವಾದ ಯೋಜನೆಗಳಲ್ಲಿರುವ ಸೂಕ್ಷ್ಮ ಭೇದಗಳೂ ಮತ್ತು ಅವುಗಳ ಮಹತ್ವವೂ ನಾಡಿನ ಕೋಟಿಗಟ್ಟಲೆ ಜನರಿಗೆ ತಿಳಿಯುವವೆಂದು ಯಾರೂ ತಿಳಿಯಬಾರದು. ಏಕೆಂದರೆ ಅವರು ಈ ವಿಷಯಗಳನ್ನು ಆಸ್ಥೆಯಿಂದ ಯೋಚಿಸಲು ಮುಂದೆಬರುವುದಿಲ್ಲ.

೬ ತನ್ನ ದೇಶದ ರಾಜ್ಯಶಾಸನವು ರಾಜಸತ್ತಾತ್ಮಕವೋ ಪ್ರಜಾಸತ್ತಾತ್ಮಕವೊ, ಸಾಮ್ರಾಜ್ಯದ ಒಂದು ಅಂಗವೊ ಸ್ವತಂತ್ರವಾದುದೊ ಎನ್ನುವುದು; ರಾಜ್ಯಶಾಸನವು ೬ ಸಾವಿರ ಪ್ರತಿನಿಧಿಗಳಿಂದ ನಡೆಯುತ್ತಿದೆಯೊ ೬ ನೂರು ಪ್ರತಿನಿಧಿಗಳಿಂದ ನಡೆಯುತ್ತಿದೆಯೊ, ಅವರಲ್ಲಿ ಹಿಂದೂಗಳು ಹೆಚ್ಚಿರುವರೊ ಮುಸಲ್ಮಾನರು ಹೆಚ್ಚಿರುವರೊ ಎನ್ನುವುದು; ಈ ಎಲ್ಲ ವಿಷಯಗಳ ಮಹತ್ವವು ಅಶಿಕ್ಷಿತ ಹಳ್ಳಿಗರಿಗೆ ತಿಳಿಯುವುದು ಕಠಿಣ. ಈ ವಿಷಯಗಳ ಚರ್ಚೆಯಲ್ಲಿ ತೊಡಗುವುದರಿಂದ ಅವರಿಗೆ ಬಹಳ ಲಾಭವೂ ಆಗಲಿಕ್ಕಿಲ್ಲ.

೭ ತಮ್ಮ ಹಳ್ಳಿಯ ಮುಖ್ಯರೂ ಪೋಲೀಸ್‌ಗೌಡ ಶಾನುಭೋಗರೂ ತಮ್ಮ ಅಧಿಕಾರದ ದರ್ಪವನ್ನು ತೋರಿಸುವರೊ; ಅಧಿಕಾರದ ಬೆದರಿಕೆ ತೋರಿಸಿ ತಮ್ಮಿಂದ ಲಂಚವನ್ನು ಸುಲಿಯಲು ಬರುವರೊ, ಅಥವಾ ತಮ್ಮ ಮಿತ್ರರಾಗಿ ಸಲಹೆಗಾರರಾಗಿ ಸಂಕಟಕಾಲದಲ್ಲಿ ಸಂಗಡಿಗರಂತೆ ವರ್ತಿಸುವರೊ; ಎಂಬುವೇ

ಹಳ್ಳಿಗರಿಗೆ ಮಹತ್ವದ ಪ್ರಶ್ನೆಗಳು. ಇದಲ್ಲದೆ ತಾವು ಪ್ರಜರನ್ನು ತಮ್ಮ ಮನಸ್ಸಿಗೆ ಬಂದಂತೆ ನಡೆಸಿಕೊಳ್ಳಲಿಕ್ಕೆ ನಿಯಮಿಸಲ್ಪಟ್ಟ ಚಿಕ್ಕ ದೊಡ್ಡ ಅಧಿಕಾರಿಗಳು ಎಂದು ತಿಳಿದುಕೊಳ್ಳುವರೊ, ತಾವು ಪ್ರಜರ ಸೇವಕರೆಂದು ತಿಳಿದುಕೊಳ್ಳುವರೊ, ಎಂಬ ಪ್ರಶ್ನೆಯೂ ಹಳ್ಳಿಗರಿಗೆ ಮಹತ್ವದ್ದು.

೮ ಹಾಗೆಯೇ, ತಮ್ಮ ಮೇಲೆ ಹೊರಿಸಲ್ಪಟ್ಟ ಕರದ ಹೊರೆ ಹೆಚ್ಚು ಭಾರವಾಗಿರುವುದೊ ಹಗುರಾಗಿರುವುದೊ, ಈ ಕರವು ತಮ್ಮಿಂದ ಯಾವ ರೀತಿಯಾಗಿ ಯಾವ ರೂಪದಲ್ಲಿ ಯಾವ ಸಮಯದಲ್ಲಿ ವಸೂಲು ಮಾಡಲ್ಪಡುವುದು, ಈ ಕರದ ಉಪಯೋಗವು ಯಾವ ಕೆಲಸಗಳಲ್ಲಿ ಆಗುವುದು, ಎಂಬ ಪ್ರಶ್ನೆಯಂತೂ ಪ್ರಜೆಗಳಿಗೆ ಅತ್ಯಂತ ಮಹತ್ವದ್ದು.

೯ ಈ ತರದ ಸುಧಾರಣೆಯು ರಾಜ್ಯಶಾಸನಕ್ಕೆ ಒಂದು ಪದ್ಧತಿಯು ಪ್ರಾಪ್ತವಾಗುತ್ತಲೆ ಆಗುವುದಿಲ್ಲ. ಆದರೆ ಆ ಪದ್ಧತಿಯನ್ನು ಅಮಲಿನಲ್ಲಿ ತರುವ ಅಧಿಕಾರಿಗಳ ಧರ್ಮಬುದ್ಧಿಯಿಂದಲೂ ತಮ್ಮ ಮತವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಲಿಕ್ಕೆ ಪ್ರಜೆಗಳಲ್ಲಿ ಬೇಕಾದ ಪುರುಷಾರ್ಥದ ಶಕ್ತಿಯಿಂದಲೂ ಆಗುವುದು. ರಾಜ್ಯಶಾಸನದ ಬಾಹ್ಯಸ್ವರೂಪವು ಯಾವುದೆ ತರದ್ದಿರಲಿ, ಅಧಿಕಾರಿಗಳು ಧರ್ಮಬುದ್ಧಿಯವರಾಗಿ ಪ್ರಜರ ಸೇವಕರಿದ್ದರೆ, ಪ್ರಜರು ಪುರುಷಾರ್ಥಿಗಳಾಗಿದ್ದರೆ, ಸರಕಾರದ ಅನ್ಯಾಯವೂ ಬಲಾತ್ಕಾರವೂ ಬಹಳ ವೇಳೆಯ ವರೆಗೆ ನಿಲ್ಲಲರಿಯದು.

## ೩ ಜಾತಿ ಜಾತಿಗಳಲ್ಲಿ ಐಕ್ಯ

೧ ದೇಶದ ಬೇರೆ ಬೇರೆ ಜಾತಿಗಳಲ್ಲಿ ಐಕ್ಯವೂ ಸಮಾಧಾನ ಶಾಂತಿಗಳೂ ಉಂಟಾಗುವ ವರೆಗೆ ಸ್ವರಾಜ್ಯವನ್ನು ದೊರಕಿಸುವುದೂ ಅದನ್ನು ಕಾಯ್ದುಕೊಳ್ಳುವುದೂ ಅಶಕ್ಯ.

೨ ಈ ಐಕ್ಯವಾಗಬೇಕಾದರೆ ಸರ್ವ ಜಾತಿಗಳಲ್ಲಿ ಮುಕ್ತವಾದ ಭೋಜನದ, ವಿವಾಹದ ವ್ಯವಹಾರವಾಗಲೇಬೇಕು. ಇಲ್ಲವೆ ಜಾತಿ-ಜಾತಿಗಳ ನಡುವಿನ ಭಿನ್ನ ಭಿನ್ನ ಧರ್ಮ ಸಂಸ್ಕೃತಿಗಳ ಭೇದವು ಇಲ್ಲದಂತಾಗಬೇಕು. ಯಾವುದಾದರೊಂದೇ ಧರ್ಮವನ್ನವಲಂಬಿಸಿ, ಅಥವಾ ಧರ್ಮಗಳನ್ನೆಲ್ಲ ತೊರೆದು, ಒಂದೇ ಸಂಸ್ಕೃತಿಯನ್ನು ನಿರ್ಮಿಸಬೇಕೆನ್ನುವುದು ಸರಿಯಲ್ಲ. ಅದು ಇಷ್ಟವಾದುದೂ ಅಲ್ಲ. ಪ್ರತಿಯೊಂದು ಜಾತಿಯೂ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು

ಸಹಿಷ್ಣುತೆಯ ಮೂಲಕ ಐಕ್ಯವನ್ನುಂಟುಮಾಡಿಕೊಳ್ಳಬೇಕು.

೩ ಆದರೆ ಈ ಐಕ್ಯಕ್ಕಾಗಿ ಬಹು-ಸಂಖ್ಯೆಯ ಜಾತಿಗಳು ಅಲ್ಪ ಸಂಖ್ಯೆಯವುಗಳಿಗೆ ಅಭಯವನ್ನೀಯಬೇಕು. ನ್ಯಾಯಕ್ಕೂ ಸಾರ್ವಜನಿಕ ಹಿತಕ್ಕೂ ವಿರೋಧವಾಗದ ಹಾಗೆ ಅಲ್ಪಸಂಖ್ಯೆಯ ಜಾತಿಗಳಿಗೆ ಧರ್ಮ, ಭಾಷೆ, ಸಾಹಿತ್ಯ, ಜಾತಿಗಳ ಕಟ್ಟು-ಕಟ್ಟಳೆ, ನಡತೆ-ನಡಾವಳಿ, ಶಿಕ್ಷಣ, ಅರ್ಥಪ್ರಾಪ್ತಿ ಮುಂತಾದುವುಗಳ ಬಗ್ಗೆ ತೊಂದರೆಯಾಗಗೊಡದಿರುವುದೇ ಬಹು ಸಂಖ್ಯೆಯ ಜಾತಿಗಳ ಗುರಿಯಾಗಿರಬೇಕು. ಬಹು-ಸಂಖ್ಯೆಯ ಜಾತಿಗಳು ತಮ್ಮ ಹಿತಚಿಂತಕರುವವೆಂದು ಅಲ್ಪ-ಸಂಖ್ಯೆಯ ಜಾತಿಗಳಲ್ಲಿ ನಂಬಿಗೆ ಹುಟ್ಟಿಸಬೇಕು.

೪ ಬಹು-ಸಂಖ್ಯೆಯ ಜಾತಿಗೆ ಅಲ್ಪ-ಸಂಖ್ಯೆಯ ಜಾತಿಯ ಭಯ ಉಂಟಾದರೆ ಅದು ಈ ಕೆಳಗಿನ ಯಾವುದೊಂದು ಸ್ಥಿತಿಯನ್ನು ಸೂಚಿಸುವುದು: (೧) ಬಹು-ಸಂಖ್ಯೆಯ ಜಾತಿಯ ಜೀವನದಲ್ಲಿ ಹುಳುಕು ಇದೆ, ಇಲ್ಲವೆ ಅದು ಹೇಡಿಯಾಗಿದೆ, ಹಾಗು ಅಲ್ಪ-ಸಂಖ್ಯೆಯ ಜಾತಿಗೆ ಪಶುಬಲದ ಹೆಮ್ಮೆ ಇರುವುದು. (ಹೆಮ್ಮೆಯು ರಾಜಸತ್ತೆಯಿಂದಾಗಲಿ ಸ್ವತಂತ್ರವಾಗಿಯಾಗಲಿ ಇರಬಹುದು). (೨) ಬಹು-ಸಂಖ್ಯೆಯ ಜಾತಿಯಿಂದ ಯಾವುದಾದರೊಂದು ಅನ್ಯಾಯವಾಗುತ್ತಿರಬೇಕು; ನಿರಾಶೆಯಿಂದ ಹಂಗುದೊರೆದು ಸಾಯುವ ವೃತ್ತಿಯು ಅಲ್ಪಸಂಖ್ಯೆಯ ಜಾತಿಯಲ್ಲಿ ಬಂದಿರಬೇಕು. ಇವೆರಡಕ್ಕೂ ಇರುವ ಉಪಾಯ ಒಂದೇ ಒಂದು: ಬಹುಸಂಖ್ಯೆಯ ಜಾತಿಯು ಸತ್ಯಾಗ್ರಹದ ಸಿದ್ಧಾಂತಗಳ ಮೇರೆಗೆ ತನ್ನ ಜೀವನವನ್ನಿಡುವುದು, ಸತ್ಯಾಗ್ರಹಿಯಾಗಿ ಎಷ್ಟು ಬೆಲೆಯಾದರೂ ಕೊಟ್ಟು ಅನ್ಯಾಯವನ್ನು ದೂರಮಾಡುವುದು, ತನ್ನ ಹೇಡಿತನವನ್ನು ಬಿಸುಟು ಅಲ್ಪ-ಸಂಖ್ಯೆಯ ಜಾತಿಯ ಪಶುಬಲವನ್ನು ಸತ್ಯಾಗ್ರಹದಿಂದ ಗೆಲ್ಲುವುದು.

೫ ಜಾತಿ-ಜಾತಿಗಳಲ್ಲಿ ಜಗಳವುಂಟಾದಾಗ ಸರಕಾರದ, ಕಟ್ಟಳೆಗಳ ನೆರವನ್ನು ಬಯಸುವುದೆಂದರೆ ಪ್ರಜರನ್ನು ನಿರ್ವೀರ್ಯರನ್ನಾಗಿ ಮಾಡಿದಂತೆಯೆ ಸರಿ. ಎರಡು ಜಾತಿಗಳು ಜಗಳವಾಡಿ ಪರಸ್ಪರರ ನೆತ್ತರು ಸುರಿಸಿದ ಮೇಲೆ ಶಾಂತವಾಗಬೇಕು; ಆದರೆ ಒಂದು ಜಾತಿಯು ಇನ್ನೊಂದು ಜಾತಿಯ ವಿರುದ್ಧ ದೂರುವುದಕ್ಕಾಗಿ ಸರಕಾರದ ಕಡೆಗೆ ಓಡಿಹೋಗುವುದು ಸರಿಯಲ್ಲ. ಮೇಲಿನ ರೀತಿಯು ಆದರ್ಶಭೂತವಾದುದಲ್ಲ. ಆದರೂ ಇದು ಪರದೇಶಿ ಸರಕಾರಕ್ಕಿಂತ, ಇಲ್ಲವೆ ಬಾಡಿಗೆ ಮನುಷ್ಯರ ಸಹಾಯದಿಂದ 'ಶಾಂತಿ'ಯನ್ನು ನೆಲೆಗೊಳಿಸು

ವುದಕ್ಕಿಂತ ಕಡಮೆ ದುಃಖದಾಯಕವಾದುದು.

೬ ಬಹುಸಂಖ್ಯೆಯ ಜಾತಿಯ ನಂಬಿಗೆಯ ವಿಷಯದಲ್ಲಿ ಅಲ್ಪಸಂಖ್ಯೆಯ ಜಾತಿಯ ಮನಸ್ಸಿನಲ್ಲಿ ಸಂಶಯವಿರುವ ವರೆಗೆ ಅಲ್ಪಸಂಖ್ಯ ಜಾತಿಯು ಕೇಳಿದ ಎಲ್ಲ ಜಾಮೀನು ಕೊಡುವುದು ಅವರನ್ನು ತನ್ನ ವಶಪಡಿಸಿಕೊಳ್ಳಲಿಕ್ಕೆ ಬಹುಸಂಖ್ಯೆಯ ಜಾತಿಗೆ ಇರುವ ಅತ್ಯಂತ ಉತ್ತಮವಾದ ಉಪಾಯ. ಯಾವ ಕರಾರುಗಳನ್ನು ಸ್ವೀಕರಿಸುವುದರಿಂದ ಅಲ್ಪಸಂಖ್ಯೆಯ ಜಾತಿಗೆ ನಿರ್ಭಯವೆನಿಸುವುದೋ ಅವೆಲ್ಲವುಗಳಿಗೆ ಸಾಧ್ಯವಿದ್ದಷ್ಟು ಹೆಚ್ಚಿಗೆ ಒಪ್ಪಿಗೆಯನ್ನೀಯುವುದೇ ಜಾಮೀನು ಎನಿಸುವುದು.

೭ ಅಲ್ಪಸಂಖ್ಯೆಯ ಜಾತಿಯ ಪ್ರಗತಿಯು ಬಹುಸಂಖ್ಯೆಯ ಜಾತಿಯ ಪ್ರಗತಿಗಿಂತ ಕಡಮೆಯಾಗಿದ್ದ ಕಡೆಯಲ್ಲಿ ಮಾತ್ರ ಈ ನಿಯಮವು ತೊಡಗುವುದು. ಬಹುಸಂಖ್ಯ ಜಾತಿಗಿಂತ ಅಲ್ಪಸಂಖ್ಯ ಜಾತಿಯೇ ಹೆಚ್ಚು ಸಮೃದ್ಧವೂ ಬಲಿಷ್ಠವೂ ಇದ್ದಲ್ಲಿ ಬಹುಸಂಖ್ಯೆಯ ಜಾತಿಯಿಂದ ಹೆಚ್ಚಿನ, ವಿಶೇಷತರವಾದ ಅಧಿಕಾರವನ್ನು ಕೇಳುವುದು ಸರಿಯಲ್ಲ.

೮ ಅಲ್ಪಸಂಖ್ಯೆಯ ಜಾತಿಯ ಕೈಯಲ್ಲಿ ಹೆಚ್ಚು ಅಧಿಕಾರ, ಧನ, ವಿದ್ಯೆ, ಅನುಭವ ಮುಂತಾದುವುಗಳಿದ್ದು ಇವರಿಂದ ಬಹುಸಂಖ್ಯೆಯ ಜಾತಿಗೆ ಭಯವೆನಿಸುತ್ತಿದ್ದರೆ ಅಲ್ಪಸಂಖ್ಯೆಯ ಜಾತಿಯು ಬಹುಸಂಖ್ಯೆಯ ಜಾತಿಯ ಹಿತಕ್ಕಾಗಿ ಪ್ರಾಮಾಣಿಕವಾಗಿ ತನ್ನ ಶಕ್ತಿಯನ್ನು ಉಪಯೋಗಿಸಬೇಕು. ಹೀಗೆ ಮಾಡುವುದೇ ಅದರ ಧರ್ಮವು. ಪರರ ಕಲ್ಯಾಣಕ್ಕಾಗಿ ಉಪಯೋಗಿಸಲ್ಪಟ್ಟ ಶಕ್ತಿಗಳು ಮಾತ್ರ ಪ್ರೋತ್ಸಾಹನೆಗೆ ಯೋಗ್ಯವಾದುವು. ಅವುಗಳ ದುರುಪಯೋಗ ಆಗತೊಡಗಿದರೆ ಅವನ್ನು ನಷ್ಟಪಡಿಸುವುದು ಶ್ರೇಯಸ್ಕರ. ಅವು ಒಂದಿಲ್ಲೊಂದು ದಿನ ನಾಶವಾಗಿಯೇ ಆಗುವವು.

೯ ಸಾರ್ವಜನಿಕ ಸಂಸ್ಥೆಗಳಲ್ಲಿ ಆಳುಗಳನ್ನೂ ಅಧಿಕಾರಿಗಳನ್ನೂ ನಿಯಮಿಸುವಾಗ ಜಾತೀಯ ತತ್ವಗಳ ಕಡೆಗೆ ಲಕ್ಷ್ಯಗೊಡಬಾರದು. ಹೀಗೆ ಜಾತಿಗಳ ತತ್ವವನ್ನನುಸರಿಸಿದರೆ ಆ ಆ ಖಾತೆಗಳಲ್ಲಿ ಕೌಶಲ್ಯವು ನಷ್ಟವಾಗುವುದು. ಆದ್ದರಿಂದ ನಂಟು, ಜಾತಿ, ಧರ್ಮ ಮೊದಲಾದುವುಗಳ ಯೋಚನೆ ಮಾಡದೆ ನಿಯಮಿಸಿಕೊಳ್ಳಲ್ಪಡುವವನಲ್ಲಿ ಆ ಕೆಲಸ ಮಾಡುವ ಯೋಗ್ಯತೆ ಇರುವುದೊ ಇಲ್ಲವೊ ಎಂಬುದನ್ನಷ್ಟೆ ನೋಡಬೇಕು. ಆಳು ಮುಂತಾದವರನ್ನು ನಿಯಮಿಸಿಕೊಳ್ಳುವಾಗ ಇದೇ ಧೋರಣೆಯನ್ನಿಡಬೇಕು.

೧೦ ಈ ಸಿದ್ಧಾಂತಗಳು ಹಿಂದೂ-ಮುಸಲ್ಮಾನ್-ಸಿಖ್ ಮುಂತಾದ ಜಾತಿಗಳಿಗೆ ಅನ್ವಯಿಸುವವು. ಶ್ರೀಮಂತರು-ಬಡವರು, ಜಮೀನುದಾರರು-ಒಕ್ಕಲಿಗರು, ಒಡೆಯರು-ಆಳುಗಳು, ಬ್ರಾಹ್ಮಣರು-ಬ್ರಾಹ್ಮಣೇತರರು, ಮುಂತಾದ ವರ್ಗಗಳಿಗೂ ಇದೇ ಸರಿಯಾದುದು.

## ೪ ಬ್ರಿಟಿಷರೊಡನೆ ಸಂಬಂಧ

೧ ಬ್ರಿಟಿಷ್ ಸರಕಾರದೊಡನೆ ಹಿಂದುಸ್ತಾನದ ಸಂಬಂಧವು ಯಾವ ತರದ್ದಿರಬೇಕೆನ್ನುವುದನ್ನು ನಿಶ್ಚಯಿಸುವ ಹಕ್ಕು ಭಾರತೀಯರದು. ಇದು ದೊರಕುವ ವರೆಗೆ ಹಿಂದುಸ್ತಾನಕ್ಕೆ ಸ್ವರಾಜ್ಯ ಸಿಕ್ಕಿದ ಹಾಗಾಗುವುದಿಲ್ಲ.

೨ ಈ ತರದ ಅಧಿಕಾರವುಳ್ಳ ಹಿಂದುಸ್ತಾನದ ಸ್ನೇಹಸಂಬಂಧವು ಬ್ರಿಟಿಷ್ ಸಾಮ್ರಾಜ್ಯದ ಸಂಗಡ ಇದ್ದರೆ ಅದರಿಂದ ಭಾರತದ ಪೂರ್ಣ ಸ್ವರಾಜ್ಯಕ್ಕೆ ಕೊರತೆ ಕುಂದುಂಟಾಗುವುದಿಲ್ಲವೆನ್ನಬಹುದು. ಬ್ರಿಟಿಷ್ ಸಾಮ್ರಾಜ್ಯದ ಸಂಬಂಧವನ್ನು ನಿರ್ಣಯಿಸುವ ಹಕ್ಕು ಇದ್ದಾಗ ಹಿಂದುಸ್ತಾನಕ್ಕೆ ಸಮಾನವಾದ ಅಧಿಕಾರವಿರುವುದು. ಸಾಮ್ರಾಜ್ಯದ ಭಿನ್ನ ಭಿನ್ನವಾದ ಅಂಗಗಳ ಮೇಲೆ ತನ್ನ ವಿಶಾಲ ದೃಷ್ಟಿಯು ಮತ್ತು ದೊಡ್ಡತನದ ಪ್ರಭಾವವನ್ನು ಬೀರಲು ಅನುವು ಇರುವುದು.

೩ ಹೀಗೆ ಬ್ರಿಟಿಷ್ ಸಾಮ್ರಾಜ್ಯದೊಳಗಿನ ಎಲ್ಲ ಅಂಗಗಳೊಡನೆ ಹಿಂದುಸ್ತಾನದ ಸಂಬಂಧವು ಬೆಳೆದರೆ, ಹಿಂದುಸ್ತಾನವು ಸತ್ಯ ಅಹಿಂಸೆಯನ್ನೆ ಸರ್ವತ್ರ ಹಬ್ಬಿಸುವ ನೀತಿಯುಳ್ಳದ್ದಾದರೆ, ಬ್ರಿಟಿಷ್ ಸಾಮ್ರಾಜ್ಯವು ಜಗತ್ತಿಗೆ ಇಂದಿನಂತೆ ಭಯಾನಕವಾಗಿ ಉಳಿಯಲಾರದು. ಅದು ಎಲ್ಲ ಪ್ರಜೆಗಳಿಗೂ ಅಭಯವೀಯುವ ಸಾಮ್ರಾಜ್ಯವಾಗುವುದು.

೪ ಆದರೆ ಇದಕ್ಕೂ ಮೊದಲು ಹಿಂದುಸ್ತಾನವು ಇನ್ನೂ ಬಹಳ ಮಾರ್ಗಕ್ರಮಣ ಮಾಡಬೇಕಾಗುವುದು. ತನ್ನ ಶಕ್ತಿಯನ್ನೂ ಸಂಸ್ಕೃತಿಯನ್ನೂ ಅರಿತುಕೊಂಡು ಅದರಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟುಕೊಂಡು ಅದನ್ನು ಸಾಧಿಸಿಕೊಳ್ಳಬೇಕು. ಎಲ್ಲಿಯ ವರೆಗೆ ಹಿಂದುಸ್ತಾನವು ನಿರ್ಬಲವೂ ಹೇಡಿಯೂ ಆಗಿರುವುದೋ ಅಲ್ಲಿಯ ವರೆಗೆ ಅದಕ್ಕೆ ಈ ತರದ ಸ್ಥಿತಿಯು ಬರುವುದು ಅಸಂಭವ.

೫ ಬ್ರಿಟಿಷ್ ಸಾಮ್ರಾಜ್ಯವೆಂದರೆ ಆಸುರೀ ತಂತ್ರ. ಇದರ ನಾಶವಾಗಬೇಕಾದುದೂ ಸರಿಯೇ. ಆದರೆ ಬ್ರಿಟಿಷ್ ಸಾಮ್ರಾಜ್ಯವು ಬೇರೆ, ಬ್ರಿಟಿಷ್

ಪ್ರಜೆಗಳು ಬೇರೆ. ಬ್ರಿಟಿಷ್ ಜನಾಂಗವು ಜಗತ್ತಿನ, ಯುರೋಪ್‌ಖಂಡದ ಬೇರೆ ಜನಾಂಗಗಳಿಗಿಂತ ಹೆಚ್ಚು ದುಷ್ಟವಾದದ್ದೂ ಅಲ್ಲ, ಸದ್ಗುಣರಹಿತ ವಾದದ್ದೂ ಅಲ್ಲ. ಆ ಜನಾಂಗದಲ್ಲಿಯೂ ಸನ್ಮಾನನೀಯ, ಅನುಕರಣೀಯ ವಾದ ಸದ್ಗುಣಗಳಿವೆ. ಆದರೆ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಆ ದೇಶದೊಡನೆ ಇರುವ ನಮ್ಮ ವಿಷಮ ಸಂಬಂಧದಿಂದ ಆ ಜನಾಂಗದ ಗುಣಗಳನ್ನು ಸನ್ಮಾನಿಸಲು ನಾವು ಅಸಮರ್ಥರಾಗಿದ್ದುದು ದುರ್ಭಾಗ್ಯವೇ ಸರಿ.

೬ ಹಿಂದುಸ್ತಾನವು ಸ್ವರಾಜ್ಯವನ್ನು ಪಡೆದ ಬಳಿಕ ಅದರಲ್ಲಿ ಇಂಗ್ಲಿಷರೂ ಭಾರತದ ಬೇರೆ ಜಾತಿಗಳಂತೆ ವಾಸಿಸಬಲ್ಲರು. ಹಿಂದುಸ್ತಾನದ ಬೇರೆ ಬೇರೆ ಜಾತಿಗಳಂತೆ ಅವರೂ ಭಾರತೀಯರಾಗಿ ದೇಶಸೇವೆಯಲ್ಲಿ ಪಾಲುಗೊಳ್ಳಬಲ್ಲರು. ಕೊನೆಯ ಪ್ರಕರಣದಲ್ಲಿ ಹೇಳಿದ ಸಿದ್ಧಾಂತಗಳ ಮೇರೆಗೆ ಅವರ ಮತ್ತು ಹಿಂದುಸ್ತಾನದ ಬೇರೆ ಜಾತಿಗಳ ಸಂಬಂಧವಿರಬಲ್ಲುದು. ಆದರೆ ಇಂಗ್ಲಿಷರು ಪರದೇಶೀಯರಾಗಿಯೇ ಇರಲು ಬಯಸಿದರೆ, ಅವರು ಹಿಂದುಸ್ತಾನಕ್ಕೆ ಅನುಕೂಲವಿರುವ ನಿಯಮಗಳಿಗೆ ಬದ್ಧರಾಗಿ ಮಾತ್ರ ನೌಕರಿ ಮಾಡಬಲ್ಲರು.

## ೫ ದೇಶೀ ರಾಜ್ಯಗಳು

೧ ಇಂದು ದೇಶೀ ರಾಜ್ಯಗಳು ಜೀವಿಸಿಕೊಂಡದ್ದು ತಮ್ಮ ಪರಾಕ್ರಮದಿಂದ ಅಲ್ಲ- ಬ್ರಿಟಿಷ್ ರಾಜ್ಯದ ಆಶ್ರಯದಿಂದ. ಬ್ರಿಟಿಷ್ ರಾಜ್ಯವು ಅಳಿದರೆ ತಾವು ಬದುಕಲಾರೆವೆಂಬ ಹೆದರಿಕೆ ಇವುಗಳಿಗೆ ಇದ್ದೇ ಇದೆ. ಆದ್ದರಿಂದ ಅವು ಬ್ರಿಟಿಷ್ ರಾಜ್ಯದ ಸಂರಕ್ಷಣೆಗಾಗಿ ಬ್ರಿಟಿಷ್-ಪ್ರಜೆಗಿಂತಲೂ ಹೆಚ್ಚು ಆಸ್ಥೆಯನ್ನು ತೋರಿಸುತ್ತಿವೆ.

೨ ಈ ಬಗೆಯ ಅತಿ ಆಸ್ಥೆಯನ್ನು ತೋರಿಸುವುದು ಹೆಚ್ಚು ಗುಲಾಮ್-ತನದ ಗುರುತು. ಈ ಆಸ್ಥೆಯಲ್ಲಿರುವುದು ಶುದ್ಧವಾದ ಭಕ್ತಿಯಲ್ಲ; ತಪ್ಪು ತಿಳಿವಳಿಕೆಯಿಂದ ಕೂಡಿದ ಅಶುದ್ಧವಾದ ಸ್ವಾರ್ಥ.

೩ ಆದ್ದರಿಂದ ದೇಶೀ ರಾಜ್ಯಗಳ ಪ್ರಜೆಗಳ ಸ್ಥಿತಿಯು ಬ್ರಿಟಿಷ್ ಪ್ರಜೆಗಳಿಗಿಂತ ಇಮ್ಮಡಿ ದಾಸ್ಯಪೂರ್ಣವಿರುವುದು. ಗುಲಾಮ್‌ತನದಲ್ಲಿ ಗುಲಾಮರ ಹಿರಿಯನು ತನ್ನ ಒಡೆಯನಿಗಿಂತ ಹೆಚ್ಚು ಕಠೋರತೆಯನ್ನು ತೋರಿಸುವಂತೆ ದೇಶೀ ರಾಜರು ತಮ್ಮ ಪ್ರಜೆಗಳೊಡನೆ ಹೆಚ್ಚು ಕಠೋರತೆಯಿಂದ ವರ್ತಿಸು

ತ್ತಿದ್ದಾರೆ. ಇದೇನೂ ಆಶ್ಚರ್ಯದ ಸಂಗತಿಯಲ್ಲ.

೪ ಈ ಪರಿಸ್ಥಿತಿಯನ್ನು ಹೋಗಲಾಡಿಸಬೇಕಾದರೆ ಬ್ರಿಟಿಷ್-ಭಾರತೀಯರು ಮೊದಲು ಸ್ವರಾಜ್ಯವನ್ನು ಗಳಿಸಬೇಕು. ಇದೇ ಅದಕ್ಕೆ ಉತ್ತಮ ಮಾರ್ಗ. ಹಿಂದುಸ್ತಾನದ ಬ್ರಿಟಿಷ್-ಪ್ರಜೆಗಳು ಸ್ವತಂತ್ರರಾಗುವ ವರೆಗೆ ಅವರಿಗೆ ದೇಶೀ ರಾಜ್ಯಗಳ ಪ್ರಜೆಗಳ ಸಂಕಟಗಳನ್ನು ನಿವಾರಿಸುವ ಶಕ್ತಿ ಬರುವುದಿಲ್ಲ. ಬ್ರಿಟಿಷ್-ಹಿಂದುಸ್ತಾನದ ಪ್ರಜೆಗಳು ತಮ್ಮ ಶಕ್ತಿ ಸಾಮರ್ಥ್ಯಗಳಿಂದ, ಪುರುಷಾರ್ಥದಿಂದ ಸ್ವತಂತ್ರರಾದರೆ ಮಾತ್ರ ದೇಶೀ ರಾಜರ ಕಣ್ಣು ತೆರೆಯುವವು; ಬ್ರಿಟಿಷರ ಕತ್ತಿಯ ಮೊನೆಯಿಂದ ತಮ್ಮ ಪ್ರಜೆಗಳನ್ನು ತಿವಿದಿಟ್ಟು, ಈಗಿನಂತೆ ಅಲ್ಪ ಸ್ವಲ್ಪ ಅಧಿಕಾರವನ್ನೂ ವಿಷಯ-ಸುಖವನ್ನೂ ಪಡೆಯುವುದಕ್ಕಿಂತ ತನು-ಮನ-ಧನದಿಂದ ಪ್ರಜೆಗಳ ಸೇವೆ ಮಾಡಿ, ಅವರ ಸುಖ ದುಃಖಗಳಲ್ಲಿ, ಬಡತನದಲ್ಲಿ ಸಮಭಾಗಿಗಳಾಗಿ ಪ್ರೀತಿಯಿಂದ ಅವರ ಹೃದಯದ ಮೇಲೆ ಅಧಿಕಾರ ನಡೆಸುವುದರಲ್ಲಿ ಮಾತ್ರ ತಮ್ಮ ಹಿರಿದಾದ ಶ್ರೇಯಸ್ಸಿರುವುದೆಂದು ಅವರಿಗೆ ಆಗ ಮನವರಿಕೆಯಾಗುವುದು.

೬ ಹೀಗೆ ಎಚ್ಚತ್ತ ದೇಶೀ ರಾಜರು ತಮ್ಮ ರಾಜ್ಯಗಳಲ್ಲಿ ತಾವೇ ಸುಧಾರಣೆಗಳನ್ನು ಮಾಡಲುಪಕ್ರಮಿಸುವರು. ಆಗ ಕೂಡ ದೇಶೀ ರಾಜರು ಎಚ್ಚರಾಗದಿದ್ದರೆ ಅವರ ರಾಜ್ಯಗಳು ಬದುಕಲಾರವೆಂದು ಹೇಳಬೇಕಾದುದಿಲ್ಲ. ಆಗ ಈ ತರದ ಜಡಭರತ ರಾಜರು ಸ್ವಚ್ಛಂದವಾಗಿ ಇರಲಾರರು. ಏಕೆಂದರೆ ಸ್ವಾತಂತ್ರ್ಯವನ್ನು ಪಡೆದ ಬ್ರಿಟಿಷ್-ಹಿಂದುಸ್ತಾನದ ಮತ್ತು ಸುಧಾರಿಸಿದ ದೇಶೀ ರಾಜ್ಯಗಳ ಒಟ್ಟಿನ ಪ್ರಜಾಮತವು ಅತ್ಯಂತ ಬಲಶಾಲಿಯಾಗುವುದು. ಆಗ ಅತಿ ದುಷ್ಟರು ಕೂಡ ತಮ್ಮ ದುಷ್ಟತನಕ್ಕೆ ತಿಲಾಂಜಲಿಯನ್ನಿತ್ತು ಹೆದರಿಕೊಂಡಿರಬೇಕಾಗುವುದು. ಇಲ್ಲದಿದ್ದರೆ ಅವರು ಬದುಕಲಾರರು.

೬ ಬಲಶಾಲಿಯಾದ, ಸ್ವತಂತ್ರವಿದ್ದ, ಶಿಕ್ಷಿತ ಪ್ರಜರ ಸಂಘಟಿತ ಲೋಕಮತದಲ್ಲಿ ಎಷ್ಟು ಸಾಮರ್ಥ್ಯವಿರುವುದೆಂಬುದರ ಅನುಭವವು ನಮಗೆ ಸಾಮಾಜಿಕ ವ್ಯವಹಾರಗಳಲ್ಲಿ ಬಂದಿದ್ದರೂ ನಾವು ಅದನ್ನು ಮರೆತುಬಿಟ್ಟಿದ್ದೇವೆ. ಪಶುಬಲದ ಆಧಾರದಿಂದಲೇ ಅಧಿಕಾರವನ್ನು ನಡೆಯಿಸುವ ಪ್ರಭುತ್ವಗಳು ಕೂಡ ಪ್ರಜಾಮತವು ಅತ್ಯಂತ ಸಾಮರ್ಥ್ಯವುಳ್ಳದ್ದಾಗುವ ವರೆಗೆ ಮಾತ್ರ ಬದುಕಿಕೊಂಡಿರುವವು. ಅತ್ಯಂತ ಬಲಿಷ್ಠ ಪ್ರಜಾಮತಕ್ಕೆ ಅತ್ಯಂತ ವಿಶಾಲವಾದ, ಬಲಿಷ್ಠ ಸಾಮ್ರಾಜ್ಯವೂ ಕತ್ತು ಬಗ್ಗಿಸಬೇಕಾಗುವುದು.

೭ ಪ್ರಜಾಮತವು ಅತ್ಯಂತ ಬಲಿಷ್ಠವಾದದ್ದು. ಈ ಮಾತನ್ನು ಅದರ ಕೈಯೊಳಗಿನ ಒಂದೇ ಒಂದಾದ ಅಜೇಯ ಸತ್ಯಾಗ್ರಹ-ಶಸ್ತ್ರವು ತೋರಿಸಿ ಕೊಡುವುದು. ತನ್ನ ಮತಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧರಿದ್ದ ಪ್ರಜೆಗಳ ಎದುರಿನಲ್ಲಿ ಹೆಚ್ಚಿನ ಜಂಬಕೊಚ್ಚುವ ಮುಕುಟಧಾರಿಗಳೂ ತಲೆಬಗ್ಗಿಸದೆ ಗತ್ಯಂತರವಿಲ್ಲ.

## ೬ ದೇಶದ ಸಂರಕ್ಷಣೆ

೧ ಸ್ವರಾಜ್ಯವನ್ನು ಪಡೆದ ಮೇಲೆ ತನ್ನ ದೇಶವನ್ನು ಸಂರಕ್ಷಿಸಿಕೊಳ್ಳುವಷ್ಟು ಬಲವು ಹಿಂದುಸ್ತಾನದಲ್ಲಿ ಇರುವುದಿಲ್ಲವೆನ್ನುವುದು ತೀರ ತಪ್ಪು.

೨ ಅಹಿಂಸಾಧರ್ಮವನ್ನು ಚನ್ನಾಗಿ ಅರಿತುಕೊಂಡು ಅದರಂತೆ ವರ್ತಿಸುವ ಜನಾಂಗಕ್ಕೆ ದೇಶದ ಸಂರಕ್ಷಣೆಗೆ ತೋಫು, ಕೋವಿ, ಮುಂತಾದ ಸೈನಿಕ ಸರಕುಗಳ ಅವಶ್ಯಕತೆಯೇ ಇಲ್ಲ. ಆದರೆ ಈ ಸ್ಥಿತಿಯು ಸದ್ಯಕ್ಕಂತೂ ಬರಿಯ ಕಲ್ಪನೆಯದು.

೩ ಹೀಗಿದ್ದರೂ ಸ್ವತಂತ್ರವಾದ, ಅನ್ಯ ರಾಜ್ಯಗಳ ಕೂಡ ಸಹಕಾರದಿಂದ ವರ್ತಿಸುವ, ಪರ ರಾಷ್ಟ್ರಗಳ ಉಪಜೀವನದ ವಸ್ತುಗಳ ಮೇಲೆ ಆಕ್ರಮಣ ಮಾಡಬಾರದೆಂಬ ಧೋರಣೆಯನ್ನಿಟ್ಟುಕೊಂಡ ಹಿಂದುಸ್ತಾನಕ್ಕೆ ಈಗಿನಂತಹ, ಮತ್ತು ಈಗಿರುವಷ್ಟು ಸೈನ್ಯವೂ ಸೈನ್ಯದ ಸರಕುಗಳೂ ಬೇಕಾಗುವುದಿಲ್ಲ.

೪ ಸ್ವರಾಜ್ಯದಲ್ಲಿ, ವಿಶಿಷ್ಟ ನಿಯಮಗಳಿಗೆ ಒಳಪಟ್ಟು ಮಿತವಾಗಿ ಶಸ್ತ್ರಾಸ್ತ್ರಗಳನ್ನಿಟ್ಟುಕೊಳ್ಳುವ ಹಕ್ಕು ಪ್ರತಿಯೊಬ್ಬ ಯೋಗ್ಯ ಮನುಷ್ಯನಿಗೂ ಇದೆ. ಸ್ವರಾಜ್ಯದ ಕಾರಭಾರವು ತನ್ನ ಮೇಲೆ ಪರರು ಆಕ್ರಮಣ ಮಾಡುವರೆಂಬ ಹೆದರಿಕೆಯಿಂದಲೇ ನಡೆಯುವುದೆಂದು ತಿಳಿಯಕೂಡದು. ಆದರೆ ಮುಂದೆ ಅಕಸ್ಮಾತ್ತಾಗಿ ಆಗುವ ಆಕ್ರಮಣವನ್ನೂ ಸಂಕಟಗಳನ್ನೂ ಮೊದಲಿಗೇ ದೂರೀಕರಿಸುವುದಕ್ಕಾಗಿ ಬೇಕಾಗುವಷ್ಟು ಸೈನ್ಯವನ್ನೂ ಯುದ್ಧ-ಸಾಮಗ್ರಿಗಳನ್ನೂ ಹಿಂದುಸ್ತಾನವು ಸಂಗ್ರಹಿಸಿ ಇಟ್ಟುಕೊಂಡಿರುವುದು. ಮುಂದೆ ಅಗತ್ಯವಿದ್ದರೆ ಕ್ಷಣಮಾತ್ರದಲ್ಲಿ ಇಡೀ ದೇಶವನ್ನೇ ಸಜ್ಜುಗೊಳಿಸುವ ಆಶೆಯನ್ನಿಟ್ಟುಕೊಂಡಿರುವುದು.

೫ ಕಟ್ಟಳೆಯ, ಅಧಿಕಾರಿಗಳ ದಾರಿ ಕಾಯದೆ ಜನರು ತಾವೇ ಜಾಗ್ರತರಾಗಿ ತಮ್ಮ ದೇಶದ ಆಡಳಿತವನ್ನು ಸಾಗಿಸಿಕೊಂಡು ಹೋಗುವಂತಹ ಶಿಕ್ಷಣ

ವನ್ನು ಕೊಡಿಸುವ ಏರ್ಪಾಡು ಮಾಡಿದರೆ, ಮತ್ತು ಅದರಲ್ಲಿ ಯುಶಸ್ಸು ದೊರೆತರೆ, ಜನತೆಯ ಸೇವೆಯನ್ನೆ ತಮ್ಮ ಜೀವನದ ಗುರಿಯಾಗಿಟ್ಟುಕೊಂಡ, ಜನತೆಯ ಸುಖಕ್ಕಾಗಿ ತಮ್ಮ ಸರ್ವಸ್ವವನ್ನೂ ಸೂರೆ ಮಾಡಲು ಸಿದ್ಧರಾದ ಸ್ವಯಂ ಸೇವಕರ ಅನೇಕ ಮಂಡಲಗಳು ಹುಟ್ಟುವವು. ಇವು ಬರಿಯ ಯುದ್ಧ-ಪ್ರಿಯ ಕ್ಷತ್ರಿಯ ವರ್ಗಗಳಲ್ಲ. ಅವು ಪ್ರಜೆಗಳಿಗೆ ಶಿಕ್ಷಣವನ್ನು ಕೊಟ್ಟು ಅವರಲ್ಲಿ ಒಂದು ಸುವ್ಯವಸ್ಥೆಯನ್ನು ತರುವಂಥ, ಅವರ ವ್ಯವಹಾರವು ಸರಾಗವಾಗಿ ಸಾಗುವಂತೆ ಮಾಡಿ ಅವರನ್ನು ಸುಖಿಗಳನ್ನಾಗಿಯೂ ಸಂತೋಷಪಡುವಂತೆಯೂ ಮಾಡುವಂಥ ವರ್ಗಗಳು ದೇಶಕ್ಕೆ ಏನಾದರೂ ಸಂಕಟ ಒದಗಿದರೆ ಮೊದಲನೇ ಪೆಟ್ಟು ಈ ಮಂಡಲಗಳಿಗೇ ಬೀಳುವುದು.

೬ ತನ್ನ ದೇಶದ ಸೈನ್ಯಕ್ಕೆ ತಾನೇ ಹೆದರುವ ಸ್ಥಿತಿ ಇದ್ದರೆ, ತಮ್ಮ ಮೇಲೆಯೇ ಸೈನ್ಯದ ಕೋವಿಗಳು ಹಾರುವವೆಂದು ಪ್ರಜರಿಗೆ ಎನಿಸಿದರೆ, ಅದು ಸ್ವರಾಜ್ಯವೂ ಅಲ್ಲ ರಾಮರಾಜ್ಯವೂ ಅಲ್ಲ. ಅದು ರಾಕ್ಷಸೀ ರಾಜ್ಯ. ಆ ರಾಜ್ಯವನ್ನು ವಿರೋಧಿಸುವುದೂ ಸತ್ಯಾಗ್ರಹಿಯ ಧರ್ಮ.

೭ ಜನತೆಯ ಸ್ನೇಹಿತನಾದ, ತನ್ನ ಪ್ರಾಣವನ್ನಿತ್ತು ಜನತೆಯನ್ನು ಸಂಕಟಗಳಿಂದ ಕಾಪಾಡುವವನಾದ ಸೈನಿಕನೇ ಕ್ಷತ್ರಿಯನು. ಪ್ರಜೆಗಳನ್ನು ಹೆದರಿಸುವವನು, ಶಾರೀರಿಕ ಬಲದಿಂದ ಇಲ್ಲವೆ ಶಸ್ತ್ರಬಲದಿಂದ ಪೀಡಿಸುವವನು ಸುಲಿಗೆಗಾರ. ಇಂಥ ಸೈನಿಕನಿಗೆ ಆಶ್ರಯಕೊಟ್ಟ ರಾಜ್ಯ ಸುಲಿಗೆಯ ರಾಜ್ಯವೆ ಸರಿ.*

## ಷಷ್ಠ ಖಂಡ

# ವಾಣಿಜ್ಯ

— ೦ —

### ೧ ಪಾಶ್ಚಾತ್ಯ ಅರ್ಥಶಾಸ್ತ್ರ

೧ ಪಾಶ್ಚಾತ್ಯ ಅರ್ಥಶಾಸ್ತ್ರವು ಸರ್ವೋಚ್ಚ ವಿಚಾರದೃಷ್ಟಿ-ಬಿಂದುಗಳಿಂದ ರಚಿಸಲ್ಪಟ್ಟಿರುವುದಿಲ್ಲ. ಆದ್ದರಿಂದ ಅದು ಅರ್ಥಶಾಸ್ತ್ರವಲ್ಲ– ಅನರ್ಥಶಾಸ್ತ್ರ. ಆದರ

*ಇದು ಇಂದಿನ ಕಾಂಗ್ರೆಸ್ಸಿನ ಭೂಮಿಕೆ. ಗಾಂಧೀಜಿಯವರು ಸತ್ಯಾಗ್ರಹದ ಮೂಲಕವೇ ಸಂರಕ್ಷಣೆ ಮಾಡಿಕೊಳ್ಳಬೇಕೆನ್ನುವರು.

ದೃಷ್ಟಿಕೋನವೇ ತಪ್ಪಿದೆ.

೨ ಈ ತಪ್ಪು-ದೃಷ್ಟಿಬಿಂದುಗಳು ಕೆಳಗೆ ಕಾಣಿಸಿದಂತೆ ಇರುವವು:

ಅ) ನಾನಾತರದ ಭೋಗಗಳನ್ನು ಹೆಚ್ಚಾಗಿ ಭೋಗಿಸುವುದೇ ಸಂಸ್ಕೃತಿಯ ಪ್ರಾಣವೆಂದು ಇದರ ತಿಳಿವಳಿಕೆ.

ಆ) ಇದು ಸರ್ವ ದೇಶಗಳಿಗೂ ಸರ್ವ ಕಾಲದಲ್ಲೂ ಪ್ರಯೋಜನಕಾರಿಯಾದ, ಆಚರಣೆಗೆ ತರಬಲ್ಲ ಸಿದ್ಧಾಂತಗಳ ಸಾರವನ್ನೊಳಗೊಂಡಿರುವುದಾಗಿ ಹೆಮ್ಮೆಪಡುತ್ತದೆ; ಆದರೆ ನಿಜವಾಗಿಯೂ ಯುರೋಪ್ ಖಂಡದ ತಂಪಾದ, ಒಕ್ಕಲುತನದ ಅನುಕೂಲತೆಗಳು ಕಡಮೆ ಉಳ್ಳ ಅನೇಕ ಚಿಕ್ಕ-ಚಿಕ್ಕ ದೇಶಗಳಲ್ಲಿ, ಮತ್ತು ಜನಸಂಖ್ಯೆಯು ಹೆಚ್ಚಾಗಿದ್ದರೂ ಹಿಡಿತುಂಬ ಜನರ ಇಲ್ಲವೆ ಅತ್ಯಂತ ಕಡಮೆ ಜನವಸತಿಯಿದ್ದ ಬೆಳೆಯುಳ್ಳ ಭೂಮಿಯಿದ್ದ ದೊಡ್ಡ ಖಂಡಗಳಲ್ಲಿ ಬಂದ ಅನುಭವದಿಂದ ಇದರ ಉದ್ಭವವಾಗಿದೆ.

ಇ) (೧) ಇದು ವ್ಯಕ್ತಿಗೆ, ಒಂದು ವರ್ಗಕ್ಕೆ, ಬಹಳವಾದರೆ ತನ್ನ ಚಿಕ್ಕ ದೇಶಕ್ಕೆ ಮಾತ್ರ ಆರ್ಥಿಕ ಲಾಭವನ್ನು ಮಾಡಿಕೊಡುವುದೇ, ತನ್ನ ದೇಶದ ಹಿತವನ್ನು ಬಯಸುವುದೇ ತನ್ನ ನೀತಿಯೆಂದೂ ಇದೇ ಅರ್ಥಶಾಸ್ತ್ರದ ಅಚಲವಾದ ಸಿದ್ಧಾಂತವೆಂದೂ ಹೇಳುತ್ತದೆ. ಅದರಂತೆ ಎಲ್ಲರೂ ವರ್ತಿಸಬೇಕೆಂದೂ ಒತ್ತಾಯಪಡಿಸುತ್ತದೆ. ಹಾಗೂ (೨) ಇದು, ಪ್ರಾಚೀನ ಕಾಲದಂತೆ ಬೆಲೆಯುಳ್ಳ ಧಾತುಗಳಿಗೆ ಈಗಲೂ ಮಿತಿಮೀರಿದ ಮಹತ್ವ ಕೊಡುತ್ತದೆ. ಈ ಮಾತುಗಳನ್ನೆಲ್ಲ ಈ ಶಾಸ್ತ್ರವು ತನ್ನ ಪುಸ್ತಕಗಳಲ್ಲಿ ಖಂಡಿಸಿದ್ದರೂ ಯೋಜನೆಯಲ್ಲೂ ವ್ಯವಹಾರದಲ್ಲೂ ಆ ನೀತಿಯನ್ನೆ ಅವಲಂಬಿಸುತ್ತದೆ.

ಈ) ಅರ್ಥಕ್ಕೂ ನೀತಿ-ಧರ್ಮಕ್ಕೂ ಇದ್ದ ಸಂಬಂಧವನ್ನು ಕಡಿದುಹಾಕಿದ್ದರಿಂದ, ಈ ಶಾಸ್ತ್ರವು ದುಡ್ಡಿಗಿಂತಲೂ ಹೆಚ್ಚು ಶ್ರೇಷ್ಠವಾದ ಜೀವನದ ವಿಷಯಗಳನ್ನು ತುಚ್ಛೀಕರಿಸುವ ರೂಢಿಯನ್ನು ಕಲಿಸಿದೆ.

೩ ಇದರ ಪರಿಣಾಮವು ಇಂತಾಗಿದೆ:

ಅ) ಈ ಅರ್ಥಶಾಸ್ತ್ರವು ಯಂತ್ರದ, ಪಟ್ಟಣಗಳ, ಹಾಗೂ (ಒಕ್ಕಲುತನಕ್ಕಿಂತಲೂ) ಉದ್ಯೋಗಗಳ ಕುರುಡು-ಪೂಜಾರಿಯಾಗಿದೆ.

ಆ) ವರ್ಗ-ವರ್ಗಗಳಲ್ಲಿ, ದೇಶ-ದೇಶಗಳಲ್ಲಿ ಏಕಭಾವವನ್ನುಂಟುಮಾಡದೆ ವಿರೋಧವನ್ನು ಹೆಚ್ಚಿಸಿದೆ. ಜನತೆಯ ಸರ್ವೋದಯವನ್ನು ಸಾಧಿಸದೆ ಸ್ವಲ್ಪ ಜನರಿಗೆ ಅಲ್ಪ ಸಮಯದ ವರೆಗೆ ಮಾತ್ರ ಲಾಭವನ್ನು ದೊರಕಿಸಿಕೊಡುವ

ವ್ಯವಸ್ಥೆ ಮಾಡಿದೆ.

ಇ) ಹಿಂದುಳಿದವೆಂದು ಎನಿಸುವ ರಾಷ್ಟ್ರಗಳಲ್ಲಿ ಪ್ರವೇಶಮಾಡಿ ಅಲ್ಲಿಯ ಧನವನ್ನು ಅಪಹರಿಸಿ, ಅಲ್ಲಿಯ ಜನರನ್ನು ವ್ಯಸನ-ಕೂಪಗಳಲ್ಲಿ ದೂಡಿ, ಅವರ ನೀತಿಯನ್ನು ಕೆಡಿಸಿ ತನ್ನ ಸಮೃದ್ಧಿಯ ಮಾರ್ಗವನ್ನು ಶೋಧಿಸುತ್ತಿದೆ.

ಈ) ಈ ಅರ್ಥಶಾಸ್ತ್ರದಂತೆ ನಡೆಯುವ ಪ್ರಜೆಗಳು ಪಶುಬಲದ ಸಹಾಯದಿಂದ ಜೀವಿಸುತ್ತಿರುವರು.

ಉ) ಶಾಸ್ತ್ರೀಯ ಸಿದ್ಧಾಂತಗಳ ಹೆಸರಿನಲ್ಲಿ ಈ ಶಾಸ್ತ್ರವು ಹುಟ್ಟಿಸಿದ ಭ್ರಾಮಕ ಕಲ್ಪನೆಗಳು ಧಾರ್ಮಿಕ ಭ್ರಮೆಗಿಂತ, ಇಲ್ಲವೆ ಭೂತಾದಿ ಭ್ರಮೆಗಿಂತ ಕಡಮೆ ಬಲಿಷ್ಠವಲ್ಲ.

## ೨ ಭಾರತೀಯ ಅರ್ಥಶಾಸ್ತ್ರ

೧ ಕೆಲವು ಸಂಗತಿಗಳನ್ನು ಒಂದು ಬದಿಗಿಟ್ಟರೂ ಹಿಂದುಸ್ತಾನವು ಅತ್ಯಂತ ವಿಶಾಲವಾದ ದೇಶ. ಇದರ ಹವೆಯೂ ನೀರೂ ನಾನಾ ಬಗೆಯದು, ಭೂಮಿ ನಾನಾ ಪ್ರಕಾರದ್ದು. ಸಾವಿರಾರು ವರ್ಷಗಳ ಬಳಿಕೆಯಿಂದ, ಹಾಗೂ ಜನತೆಯ ಬಡತನದಿಂದ, ಅದರ ಬೆಳವಣಿಗೆ ಕಡಿಮೆಯಾಗಿಬಿಟ್ಟಿದೆ. ಮಾನವ ಕುಲದ ೧/೫ ಜನತೆಯು ಭಾರತದಲ್ಲಿದ್ದು, ಅದು ಚಿಕ್ಕ ಚಿಕ್ಕ ಹಳ್ಳಿಗಳಲ್ಲಿ ಹರಡಿಕೊಂಡಿದೆ. ಇಲ್ಲಿ ಧರ್ಮ, ಸಂಸ್ಕೃತಿ, ಸ್ವಭಾವ ಹಾಗೂ ನಡತೆ ನಡಾವಳಿಯ ವೈವಿಧ್ಯವುಂಟು. ಪಾಶ್ಚಾತ್ಯ ಅರ್ಥಶಾಸ್ತ್ರದ ಗುಟ್ಟು-ಗುರಿಗಳನ್ನು ಮುಂದಿಟ್ಟುಕೊಂಡು ಭಾರತೀಯ ಅರ್ಥಶಾಸ್ತ್ರದ ಯೋಚನೆ ಮಾಡಬಾರದೆಂದು ಹೇಳಲು ಈ ಮೇಲ್ಕಂಡ ಕಾರಣಗಳು ಸಾಕಷ್ಟಾಗಿವೆ.

೨ ಭಾರತೀಯ ಅರ್ಥಶಾಸ್ತ್ರದಲ್ಲಿ ಈ ಮುಖ್ಯ ಗುಣಗಳಿರಬೇಕು:

ಅ) ಇದರ ಸಿದ್ಧಾಂತಗಳು ಹಳ್ಳಿಗಳ ದೃಷ್ಟಿಯಿಂದ ಯೋಜಿಸಲ್ಪಟ್ಟಿರಬೇಕು.

ಆ) ಇದು ಒಕ್ಕಲುತನಕ್ಕೂ ಉದ್ಯೋಗಗಳಿಗೂ ಬಾಂಧವ್ಯವನ್ನು ಸ್ಥಾಪಿಸಬೇಕು. ಒಕ್ಕಲುತನ ಮತ್ತು ಉದ್ಯೋಗ, ಇವೆರಡೂ ಒಂದೇ ನೆರಳಿನಲ್ಲಿ ಬೆಳೆಯಬೇಕು.

ಇ) ನಾನಾ ಧರ್ಮ ಸಂಸ್ಕಾರ ಸ್ವಭಾವಗಳ ಜನರಲ್ಲಿ, ವರ್ಗಗಳಲ್ಲಿ, ಅನುಚಿತವಾದ ಹೋರಾಟ-ಮೇಲಾಟ, ಕೇಡು-ಕ್ಲೇಶಗಳು ಹುಟ್ಟಕೂಡದೆಂಬ

ಧೋರಣೆಯಿಂದ ಇದು ಯೋಜಿಸಲ್ಪಟ್ಟದ್ದಿರಬೇಕು.

ಈ) ಆದ್ದರಿಂದ ಇದು ನೀತಿ-ಧರ್ಮವನ್ನು ಅಡಿಗಡಿಗೆ ತನ್ನೆದುರಿನಲ್ಲಿ ಇಟ್ಟು ಕೊಂಡು ಜನತೆಯು ಸರ್ವೋದಯಕ್ಕೆ ಯತ್ನಿಸಬೇಕು.

## ೩ ಗ್ರಾಮ-ದೃಷ್ಟಿ

೧ ಹಿಂದೂಸ್ತಾನದ ಪ್ರಾಣವು ಹಳ್ಳಿಗಳಲ್ಲಿದೆಯೆನ್ನುವುದು ಸರ್ವಮಾನ್ಯ. ಆದರೆ ಹಿಂದುಸ್ತಾನದ ಈಗಿನ ಆರ್ಥಿಕ ಯೋಜನೆಗಳಿರುವುದು ಹಳ್ಳಿಗಳ ಹಿತಕ್ಕಾಗಿ ಅಲ್ಲ- ಪಟ್ಟಣಗಳ ಮತ್ತು ಪರದೇಶಗಳ ಕಲ್ಯಾಣಕ್ಕಾಗಿ.

೨ ಇದರಿಂದ ಹಳ್ಳಿಯ ಮೂಲವಸ್ತುಗಳು ಪಟ್ಟಣಕ್ಕೂ, ಪಟ್ಟಣದಿಂದ ಪರದೇಶಕ್ಕೂ ಹೋಗುವುದು; ಪಟ್ಟಣಗಳಲ್ಲಿಯೂ ಪರದೇಶಗಳಲ್ಲಿಯೂ ತಯಾರಿಸಿದ ಸಿದ್ಧ-ವಸ್ತುಗಳು ಹಳ್ಳಿಗಳಲ್ಲಿ ಮಾರಲಾಗುವುದು. ಇದರಿಂದ, ಮೂಲವಸ್ತುಗಳಿಂದ ಬಂದ ಅಲ್ಪ-ಸ್ವಲ್ಪ ಹಣವು ಕೂಡ ಸಿದ್ಧವಸ್ತು ಗಳನ್ನು ಕೊಳ್ಳುವುದರಲ್ಲಿ ವೆಚ್ಚವಾಗಿ ಹಳ್ಳಿಗನ ಕೈ ಬರಿದಾಗಿಯೇ ಉಳಿಯು ವುದು.

೩ ಜೀವನಕ್ಕೆ ಬೇಕಾಗುವ ಎಷ್ಟೋ ವಸ್ತುಗಳು ಹಳ್ಳಿಗಳಿಗೆ ಹೊಲ ಗಳಿಂದಲೂ ಆರಣ್ಯಗಳಿಂದಲೂ ಎಷ್ಟೋ ಮಟ್ಟಿಗೆ ಪುಕ್ಕಟೆ ದೊರೆಯುವವು. ಅವುಗಳನ್ನು ಒಟ್ಟುಗೂಡಿಸಿ ಪಟ್ಟಣಿಗರಿಗೆ ಮಾರುವುದರಿಂದ ಬಡವರ ಉಪ ಜೀವನ ಸಹಜವಾಗಿ ಸಾಗಬಹುದು. ಆದರೆ ಇದಕ್ಕೆ ವಿಪರೀತವಾಗಿ, ಪಟ್ಟಣ ಗಳಲ್ಲಿಯೂ ಪರದೇಶಗಳಲ್ಲಿಯೂ ಹುಟ್ಟಿದ ಕಣ್ಣಿಗೆ ನುಣ್ಣಗೆ ಅನುಕೂಲವಾಗಿ ತೋರುವ, ನಿಜವಾಗಿಯೂ ತೋರಿಕೆಗಾಗಿ ಮಾತ್ರ ಚನ್ನಾಗಿ ಕಾಣುವ ವಸ್ತು ಗಳನ್ನು ಉಪಯೋಗಿಸುವ 'ಫೇಶನ್ನು' (ರೀತಿ) ಹೆಚ್ಚಾದದ್ದರಿಂದ ಹಳ್ಳಿಗಳ ಆನೇಕ ಉದ್ಯೋಗಗಳು, ಕೂಲಿಯ ಕೈಕಸುಬುಗಳು ಮುಳುಗಿಹೋಗಿವೆ, ಈಗಲೂ ಮುಳುಗುತ್ತ ಇವೆ.

೪ ಇಂಥ ಅತ್ಯಂತ ಆಕರ್ಷಕವಾದ ಎಷ್ಟೋ ವಸ್ತುಗಳು ಆರೋಗ್ಯಕ್ಕೂ ಸ್ವಚ್ಛತೆಗೂ ಹಾನಿಕರವಾಗಿರುವವಲ್ಲದೆ ಅತಿ ತುಟ್ಟಿಯೂ ಇರುವವು. ಇವು ಗಳನ್ನು ಉಪಯೋಗಿಸುವುದರಿಂದ ವ್ಯರ್ಥವಾದ ವೆಚ್ಚದ ಚಟ ಮಾತ್ರ ಅಂಟಿ ಕೊಳ್ಳುತ್ತದೆ. ಹಲ್ಲು ಉಜ್ಜುವ ಕರಿಬೆಟ್ಟಿನ ಬದಲು ನಾನಾತರದ ದಂತ ಮಂಜನಗಳು, ಟೂಥ್‌ಪೇಸ್ಟುಗಳು, ಬ್ರಶ್‌ಗಳು; ಕಟ್ಟಿಗೆಯ ಮಂಚಗಳ

ಬದಲು ಸ್ಪ್ರಿಂಗಿನ ಮಂಚಗಳು; ಬೆಲ್ಲ, ಗಡಿಗೆ-ಕಲ್ಲುಸಕ್ಕರೆಯ ಬದಲು ಗಿರಣಿಗಳಲ್ಲಿ ತಯಾರಾದ ಬಿಳಿ ಕಲ್ಲುಸಕ್ಕರೆ; ಹೆಂಚಿನ ಬದಲು ತಗಡು; ಕತ್ತದ, ನಾರಿನ ಹಗ್ಗಗಳ ಬದಲು ತಂತಿ, ತಂತಿಯ ಹಗ್ಗಗಳು; ಮಣ್ಣಿನ ಪಾತ್ರೆಗಳ ಬದಲು ಜಪಾನಿನ, ಚೀನದ ಪಾತ್ರೆಗಳು; ಹಳ್ಳಿಯ ಬಿದಿರಿನ ಬುಟ್ಟಿ ಮರ ಮುಂತಾದುವುಗಳ ಬದಲು ತಗಡಿನ ಬುಟ್ಟಿಗಳು ಮೊರಗಳು ಡಬ್ಬಿಗಳು ಮುಂತಾದುವು; ಹಳ್ಳಿಯ ಕಮ್ಮಾರರು ಮಾಡಿದ ಸಳಿ, ಸರಪಳಿ, ಕುಡುಗೋಲು, ಸೌಟು, ಸುತ್ತಿಗೆ ಕೊಡಲಿಗಳ ಬದಲು ಯಂತ್ರದಿಂದಾದ ಸಳಿ, ಸರಪಳಿ, ಸೌಟು, ಸುತ್ತಿಗೆ ಮುಂತಾದ ಆಕರ್ಷಕ ವಸ್ತುಗಳು; ಹಳ್ಳಿಯ ಅಕ್ಕಸಾಲಿಗರ ಆಭರಣಗಳ ಬದಲು ಪಟ್ಟಣಗಳಲ್ಲಿ ಯಂತ್ರಗಳಿಂದ ತಯಾರಿಸಲ್ಪಟ್ಟ ಅಚ್ಚಿನ ಆಭರಣಗಳು; ಹಳ್ಳಿಯ ಹೆಂಗುಸರು ಮಾಡಿದ ಬೀಸಣಿಕೆ, ಆಸನ, ಜಾಜಮ್ ಶಾಲುಗಳ ಬದಲು ಜಪಾನಿನ ಕಾಗದದ ಬೀಸಣಿಕೆ, ಗಿರಣಿಯ ಆಸನ, ಶಾಲು, ಮೊದಲಾದುವು; ಸೀಗೆಕಾಯಿ, ಅಂಟ್ವಾಳಕಾಯಿಗಳ ಬದಲು ಸುಗಂಧಮಿಶ್ರಿತವಾದ ಸಾಬೂನು; ಗಲಗಿನ ಲೆಕ್ಕಣಿಕೆಗಳ ಬದಲು ಫೌಂಟನ್‌ಪೆನ್ನು ಟಾಕುಗಳು; ಹಳ್ಳಿಯಲ್ಲಿ ತಯಾರಾದ ಮಸಿಯ ಬದಲು ರಸಾಯನದಿಂದ ತಯಾರಿಸಲ್ಪಟ್ಟ ಮಸಿ; ಹಳ್ಳಿಯ ಕೈ-ಕಾಗದದ ಬದಲು ಯಂತ್ರದಲ್ಲಿ ತಯಾರಾದ ಕಾಗದ; ಮನೆಯ ಶುದ್ಧ ಕಷಾಯ ಮುಂತಾದ ವನಸ್ಪತಿ-ಔಷಧಗಳ ಬದಲು ಸಿದ್ಧೌಷಧಿಗಳು; ಹಳ್ಳಿಯ ಪಾತ್ರೆಗಳ ಬದಲು ಬಾಟ್ಲಿ ಮುಂತಾದುವು.

೫ ಇವೆಲ್ಲ ವಸ್ತುಗಳು ಹಳ್ಳಿಗಳಲ್ಲಿ ಮಾಡಿದ ಒಡವೆಗಳಿಗಿಂತ ಅಗ್ಗವಾಗಿ ದೊರೆಯುವವೆಂದಲ್ಲ. ಆದರೂ ಇವು ಮೋಹಕವಿರುವುದರಿಂದ, ಶ್ರೀಮಂತರೂ ಅವಿಚಾರಿಗಳೂ ಮಾಡಿದ ಫೇಶನ್ನಿನ ಅಂಧಾನುಕರಣವು ಸಭ್ಯತೆ ಎನಿಸಿದ್ದರಿಂದ, ಪ್ರಜೆಗಳ ಆರ್ಥಿಕ ಸ್ಥಿತಿ ಚನ್ನಾಗಿಲ್ಲದಿದ್ದರೂ ಅವು ಮಾರಾಟವಾಗುತ್ತವೆ.

೬ ಅವಿಚಾರಿಗಳಾದ ಯಂತ್ರವಾದಿಗಳೂ ಹಳ್ಳಿಗರನ್ನು ನಿರ್ಧನಿಕರನ್ನಾಗಿ ಮಾಡಲು ಬಹಳ ಪರಿಶ್ರಮಪಟ್ಟಿದ್ದಾರೆ. ಇವರು ಹತ್ತಿ ಹಿಂಜುವ, ಬತ್ತ ಕುಟ್ಟುವ, ಹಿಟ್ಟು ಬೀಸುವ, ಎಣ್ಣೆಗಳನ್ನು ತೆಗೆಯುವ ಕಾರ್‌ಖಾನೆಗಳನ್ನು ಸ್ಥಾಪಿಸಿದ್ದಾರೆ; ಊರಿಂದೂರಿಗೆ ಹೋಗಿ ಬರುವುದಕ್ಕಾಗಿ ಮೋಟಾರು ಬಸ್ಸುಗಳನ್ನು ಇಟ್ಟಿದ್ದಾರೆ.

೭ ಅಲ್ಪವಾದರೂ ಚಿಂತೆಯಿಲ್ಲ, ತತ್ಕಾಲಕ್ಕೆ ಹೆಚ್ಚು ಲಾಭವು ದೊರೆತರೆ

ಸಾಕೆಂಬ ವ್ಯಾಪಾರಿಗಳ ಸ್ವಾರ್ಥ-ದೃಷ್ಟಿಯ ಮೂಲಕ, ಹಳ್ಳಿಯ ವಸ್ತುಗಳ ಮೂಲ ಬೆಲೆ ಪರದೇಶೀ ಮತ್ತು ಯಂತ್ರದ ವಸ್ತುಗಳ ಬೆಲೆಗಿಂತ ತೀರ ಕಡಮೆಯಿದ್ದರೂ ಕೊಳ್ಳುವವನಿಗೆ ಹಳ್ಳಿಯ ವಸ್ತುಗಳು ತುಟ್ಟಿಬೀಳುತ್ತವೆ. ಇದರಿಂದ ಹಳ್ಳಿಗರ ಕೈಯಲ್ಲಿರಬೇಕಾಗಿದ್ದ ಪೇಟೆಗಳು ಪರದೇಶೀಯರ ಮತ್ತು ಗಿರಣಿಗಳ ಒಡೆಯರ ಕೈಸೇರಿವೆ.

೮ ಅರ್ಥಶಾಸ್ತ್ರವು ಹಳ್ಳಿಯ ದೃಷ್ಟಿಯನ್ನಿಟ್ಟುಕೊಂಡು ಬರೆಯಲ್ಪಟ್ಟ ಮೇಲೆ, ಜೀವನದಲ್ಲಿ ಹಳ್ಳಿಯ ಕಡೆಗೆ ದೃಷ್ಟಿಯು ಹೊರಳಿದ ಮೇಲೆ ಮಾತ್ರ, ಹಳ್ಳಿಗಳು ಹುಟ್ಟಿಸಿದ ವಸ್ತುಗಳ ಉಪಯೋಗದ ಕಡೆಗೆ ಜನತೆಯ ಮನಸ್ಸು ಹರಿಯುವುದು. ತಮಗೆ ಅವಶ್ಯವಿದ್ದ ವಸ್ತುಗಳನ್ನು ಹಳ್ಳಿಗಳಲ್ಲೇ ಹುಟ್ಟಿಸ ಬೇಕೆಂದು ಮನಸ್ಸಾಗುವುದು. ಇದರಿಂದ ಹಳ್ಳಿಗಳಲ್ಲಿದ್ದ ಕಲೆಯ ಮತ್ತು ಉದ್ಯೋಗಗಳ ಪುನರುಜ್ಜೀವನದ ಕಡೆಗೆ, ಹಳ್ಳಿಗರ ಶಿಕ್ಷಣದ ಕಡೆಗೆ, ಹಳ್ಳಿಯ ಕಾಡುಗಳನ್ನೂ ಹೊಲಗಳನ್ನೂ ಹರಗಿ ಹೆಚ್ಚು ಉಪಯೋಗವನ್ನು ಮಾಡಿಕೊಳ್ಳುವುದರ ಕಡೆಗೆ, ಅವುಗಳಲ್ಲಿ ಹೆಚ್ಚು ಬೆಳೆಯನ್ನು ತೆಗೆಯುವುದರ ಕಡೆಗೆ, ಜ್ಞಾನದ ಅಭಾವದಿಂದ ವ್ಯರ್ಥವಾಗಿ ಹಾಳಾಗಿ ಹೋಗುವ ಸಂಪತ್ತನ್ನೂ ನೈಸರ್ಗಿಕ ವಸ್ತುಗಳನ್ನೂ ಹುಡುಕಿ ಉಪಯೋಗಿಸಿಕೊಳ್ಳುವುದರ ಕಡೆಗೆ ಜನತೆಯ ಮನಸ್ಸು ಹರಿಯುವುದು.

೯ ಇಂದು ಸಂಪತ್ತು ಭಾರತದ ಹಳ್ಳಿಗಳಿಂದ ಪಟ್ಟಣಗಳಿಗೂ, ಪಟ್ಟಣ ಗಳಿಂದ ಪರದೇಶಗಳಿಗೂ ಹರಿದುಹೋಗುತ್ತಿದೆ. ಇದನ್ನು ಆಮೂಲವಾಗಿ ತಡೆದುಹಿಡಿದು, ಪ್ರವಾಹವು ತಿರುಗಿ ಹಳ್ಳಿಗಳತ್ತ ಹರಿಯುವಂತೆ ಮಾಡುವುದು ಅತ್ಯಂತ ಅವಶ್ಯ. ಹಳ್ಳಿಗಳ ಸಂಪತ್ತು ಹಳ್ಳಿಗಳಲ್ಲೇ ಉಳಿಯುವಂತೆ, ಹಳ್ಳಿ ಗಳು ಸ್ವಾವಲಂಬಿಗಳಾಗುವಂತೆ, ಇಷ್ಟೇ ಅಲ್ಲ, ಪಟ್ಟಣಿಗರು ತಮ್ಮ ಅವಶ್ಯ-ಕತೆಯ ವಸ್ತುಗಳನ್ನು ಹಳ್ಳಿಗಳಲ್ಲೇ ಹುಟ್ಟಿಸಿಕೊಳ್ಳುವಂತೆ, ಪಟ್ಟಣಿಗರಿಗೆ ಹಳ್ಳಿಗಳೆ ಸರ್ವವಸ್ತುಗಳ ಪೂರೈಕೆಯ ಕೇಂದ್ರಗಳಾಗುವಂತೆ ಮಾಡುವುದು ಅತ್ಯಂತ ಅವಶ್ಯ.

## ೪ ಧನೇಚ್ಛೆ

೧ ಸಾಮಾನ್ಯವಾಗಿ ಬಹಳ ಜನರು ತಮ್ಮ ಆರ್ಥಿಕ ಸ್ಥಿತಿಯಲ್ಲಿ, ಸುಖಾನುಕೂಲತೆಗಳಲ್ಲಿ ಸ್ವಲ್ಪ ಸುಧಾರಣೆಯನ್ನೂ ಉನ್ನತಿಯನ್ನೂ ಮಾಡಿ

ಕೊಳ್ಳಬಯಸುವರು ಎನ್ನಬಹುದಾದರೂ ಮನುಷ್ಯನ ಸುಖ-ಸಂಪತ್ತಿನ ಇಚ್ಛೆಗೆ ಮೇರೆಯೆ ಇಲ್ಲ. ಎಲ್ಲರೂ ಲಕ್ಷಾಧಿಪತಿಗಳು, ಜಮೀನುದಾರರು, ಇಲ್ಲವೆ ರಾಜರಾಗಲು, ಬಂಗಲೆ ಅರಮನೆಗಳಲ್ಲಿ ವಾಸಿಸಲು ಬಯಸುವರು ಎಂದು ಹೇಳುವುದು ಸಾಮಾನ್ಯ ಮನುಷ್ಯನಿಗೆ ಅನ್ವಯಿಸದಂತಹ ವಿಧಾನ. ಅಲ್ಲದೆ ಹೀಗೆ ಹೇಳುವುದೆಂದರೆ ಜನಸಾಮಾನ್ಯರ ವಿಷಯದಲ್ಲಿ ಕೀಳು-ಅಭಿಪ್ರಾಯ ವನ್ನು ವ್ಯಕ್ತಪಡಿಸಿದಂತೆ, ಅವರ ಎದುರಿನಲ್ಲಿ ಕೀಳು ತರಗತಿಯ ಆದರ್ಶವನ್ನು ಇಟ್ಟಂತೆ.

೨ ಧನವನ್ನು ತಿರಸ್ಕರಿಸದ, ಆದರೆ ಅದರ ಅತ್ಯಾಶೆ ಇಲ್ಲದ ಜನರು ಬಹಳ ವಾಗಿದ್ದಾರೆ. ಆದರೆ ಅವರು ವರ್ಷದ ಕೊನೆಗೆ ತಮ್ಮಲ್ಲಿ ಸ್ವಲ್ಪ ಹಣ ಉಳಿದು ದನ್ನು ನೋಡಲಿಚ್ಛಿಸುವರೆಂಬುದೂ ನಿಜ. ಅದೂ ಕೂಡ ಬೇನೆ ಬೇಸರಿಕೆ, ಮದುವೆ ಮುಂಜಿ, ಹಬ್ಬ ಹುಣ್ಣಿಮೆ, ತೀರ್ಥಯಾತ್ರೆ ದಾನ-ಧರ್ಮಕ್ಕಾಗಿ, ಇಲ್ಲವೆ ಮುಪ್ಪಿನಲ್ಲಿ ವೆಚ್ಚಮಾಡುವುದಕ್ಕೆ ಸಾಕಾಗುವಷ್ಟು ಮಾತ್ರ. ಧಾರ್ಮಿಕ ಸಂಸ್ಕಾರವಿದ್ದ ಜನರಲ್ಲಿ ಧನದ ಮತ್ತು ಸುಖದ ಅಪಾರವಾದ ತೃಷ್ಣೆಗೆ ಎಲ್ಲೆ ಇದ್ದೇ ಇದೆ.

೩ ರಾಜರೆಲ್ಲರಿಗೆ ಸಿಕಂದರ್ ಅಥವಾ ನೆಪೋಲಿಯನ್, ಭರ್ತೃಹರಿ ಅಥವಾ ಗೋಪಿಚಂದರಾಗಲು ಹೇಗೆ ಮಹತ್ವಾಕಾಂಕ್ಷೆಯೂ ಶಕ್ತಿಯೂ ಇರುವುದಿಲ್ಲವೊ, ಹಾಗೆಯೆ ಬಹು ಜನರಿಗೆ ತೀರ ಶ್ರೀಮಂತರಾಗುವ, ಇಲ್ಲವೆ ತೀರ ಬಡವರಾಗುವ ಮಹತ್ವಾಕಾಂಕ್ಷೆಯೂ ಧೈರ್ಯ ಸಾಹಸಗಳೂ ಇರುವು ದಿಲ್ಲ.

೪ ಆದರೆ ಪ್ರತಿಯೊಂದು ಜನಾಂಗದಲ್ಲೂ ಕೆಲವರಿಗೆ ಮಾತ್ರ ಅಸಾಧಾರಣ ಮಹತ್ವಾಕಾಂಕ್ಷೆಯೂ ಸಾಹಸದ ಕಾರ್ಯಗಳನ್ನು ಮಾಡುವ ಅಸಾಧಾರಣ ಶಕ್ತಿಯೂ ಇರುವುದು. ಕೆಲವರ ಗುರಿ ಬಡತನವಾಗಿದ್ದರೆ ಇನ್ನು ಕೆಲವರಿಗೆ ಶ್ರೀಮಂತಿಕೆಯ ಹೆಬ್ಬಯಕೆ.

೫ ಜನತೆಯ ಸುಖಾನುಕೂಲತೆಗಳಿಗೂ ಧನೇಚ್ಛೆಗೂ ಹಾನಿಯಾಗದಂತೆ, ಸಾಹಸ ಶೌರ್ಯದ ಕಾರ್ಯಗಳನ್ನು ಮಾಡಿತೋರಿಸಬೇಕೆನ್ನುವವರಿಗೆ ಸುಸಂಧಿ ದೊರೆಯುವಂತೆ, ಸಮಾಜ-ರಚನೆಯಾಗಬೇಕು. ಸಮಾಜದ ವ್ಯವಸ್ಥೆಯೂ ಹಾಗಿರಬೇಕು. ಇಷ್ಟೇ ಅಲ್ಲ, ಇದರಿಂದ ಹಲವರ ಮಹತ್ವಾಕಾಂಕ್ಷೆಗೆ ಉತ್ತೇ ಜನ ದೊರೆತರೂ ಕೊನೆಯಲ್ಲಿ ಸಮಾಜಕ್ಕೆ ಲಾಭವಾಗುವಂತೆ ಇರಬೇಕು.

೬ ಸಮಾಜದ ರಚನೆಯಲ್ಲಿ ಪೌರುಷ-ಪ್ರದರ್ಶನಕ್ಕೆ ಒಳ್ಳೆಯ ಸಂಧಿ ಸಂದರ್ಭಗಳು ದೊರೆಯದಿದ್ದರೆ ಜನರ ಮಹತ್ವಾಕಾಂಕ್ಷೆಯು ಅವರನ್ನು ಅಡ್ಡ ದಾರಿಗೆ ಸೆಳೆದೊಯ್ಯುವುದು. ಅದರಿಂದ ಸಮಾಜಕ್ಕೆ ಹಾನಿಯಾಗುವುದು.

೭ ಉದ್ಯೋಗ ವ್ಯವಸಾಯಗಳಲ್ಲಿಯೂ, ಸಮಾಜ ಸೇವೆಯ ಎಷ್ಟೋ ಕಾರ್ಯಗಳಲ್ಲಿಯೂ, ನಾನಾ ತರದ ಸಾಹಸವನ್ನು ತೋರಿಸಬೇಕಾಗುವುದು; ನಾನಾ ಬಗೆಯ ಕಷ್ಟ ನಷ್ಟಗಳನ್ನು ಸಹಿಸಬೇಕಾಗುವುದು. ಇವುಗಳಲ್ಲಿ ಯಶಸ್ಸು ದೊರೆತೇ ದೊರೆಯುವುದೆಂದು ಹೇಳಲಾಗುವುದಿಲ್ಲ. ಸಾರ್ವಜನಿಕ ಸಂಸ್ಥೆಗಳಿಗಿಂತಲೂ ವ್ಯಕ್ತಿಗಳು, ಸಾರ್ವಜನಿಕವಲ್ಲದ ಸಂಸ್ಥೆಗಳು, ಇವುಗಳ ಪ್ರಯೋಗ ಮಾಡಿದರೆ ಹೆಚ್ಚು ಅನುಕೂಲವಾಗುವುದಲ್ಲದೆ ಯಶಸ್ಸೂ ದೊರಕ ಬಹುದು. ಸಮಾಜದ ರಚನೆ ಇದಕ್ಕೆ ಅನುಕೂಲವಾಗಿರಬೇಕು.

## ೫ ವ್ಯಾಪಾರ

೧ ವ್ಯಾಪಾರದ ಯೋಗ್ಯ ಕಾರ್ಯಕ್ಷೇತ್ರವೆಂದರೆ ಅವಶ್ಯವಾದ ದೊಡ್ಡ ಉದ್ಯೋಗಗಳನ್ನು ಬೆಳೆಯಿಸುವುದು, ಅವಶ್ಯವಿದ್ದ ವಸ್ತುಗಳನ್ನು ಜನತೆಗೆ ತಲ್ಪಿಸುವುದು. ಇದರಲ್ಲಿ ಅನಾಯಾಸವಾಗಿ ಉಳಿತಾಯವಾದುದೇ ಲಾಭ.

೨ ಉದ್ಯೋಗ ವ್ಯವಸಾಯಕ್ಕೆ ತಗಲುವ ವೆಚ್ಚವನ್ನು ಪದಾರ್ಥದ ಮೇಲೆ ಹಂಚಿಹಾಕಿದ ಮೇಲೆ, ಹಾನಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹಾಕಿದ ಹೆಚ್ಚಿನ ಬೆಲೆಯೆ ಅನಾಯಾಸವಾದ ಉಳಿತಾಯವೆನಿಸುವುದು. ಈ ಉಳಿ-ತಾಯವು ಪ್ರತ್ಯೇಕದಲ್ಲಿ ಅತ್ಯಲ್ಪವಾಗಿ ತೋರಿದರೂ ಉದ್ಯೋಗದ ಪ್ರಮಾಣ ದಿಂದ ಒಟ್ಟುಗೂಡಿಸಿ ನೋಡಿದರೆ ಮೊತ್ತದಲ್ಲಿ ದೊಡ್ಡದಾಗಿ ಕಾಣುವುದು.

೩ ಹೀಗೆ ಹೆಚ್ಚಾಗಿ ಉಳಿದ ಧನವನ್ನು ಆ ಆ ಉದ್ಯೋಗಗಳಲ್ಲಿ ಕೆಲಸ ಮಾಡುವ ಕೂಲಿಕಾರರ ಕಲ್ಯಾಣಕ್ಕಾಗಿಯೂ ಇತರ ಅನೇಕ ಉಪಯೋಗೀ ಉದ್ಯೋಗಗಳನ್ನು ಹೆಚ್ಚಿಸುವುದಕ್ಕಾಗಿಯೂ ಸಾರ್ವಜನಿಕ ಹಿತದ ಕಾರ್ಯಗಳಿ ಗಾಗಿಯೂ ವಿನಿಯೋಗಿಸುವುದು ಕಲ್ಯಾಣಕರವಾದುದು.

೪ ಇಂಥ ಧನದ ಒಡೆಯನು, ತಾನು ಈ ಧನದ ಸಂರಕ್ಷಕನೆಂದೂ ಇದನ್ನು ಸಾರ್ವಜನಿಕ ಕಾರ್ಯಗಳಿಗಾಗಿ ವಿನಿಯೋಗಿಸುವುದು ತನ್ನ ಧರ್ಮವೆಂದೂ ತಿಳಿದು ಕೊಂಡರೆ, ಅವನು ಭಂಡವಲುಗಾರನಿದ್ದರೂ ಪ್ರಜೆಗಳ ಕಲ್ಯಾಣವನ್ನು ಮಾಡು ವನು, ಮತ್ತು ಪ್ರಜೆಗಳ ಹೊಟ್ಟೆಕಿಚ್ಚಿಗೆ ಬಲಿಯಾಗುವುದಿಲ್ಲ.

೫ ಆದರೆ ಅವನು ಈ ಧನದಿಂದ ಸ್ವಾರ್ಥಸಾಧನೆಯು ದಾರಿಯನ್ನೇ ಹಿಡಿದರೆ, ಮತ್ತು ಈ ಧನವನ್ನು ಇಮ್ಮಡಿಸುವ ದೃಷ್ಟಿಯನ್ನೇ ಇಟ್ಟುಕೊಂಡರೆ ಜನತೆಯ ತಿರಸ್ಕಾರದ ಕೂರಂಬುಗಳಿಗೆ ಗುರಿಯಾಗುತ್ತಾನೆ. ಅಲ್ಲದೆ ಶ್ರೀಮಂತ ಬಡವರಲ್ಲಿ ಭೇದಭಾವನೆಯೂ ಕಲಹಗಳೂ ಹುಟ್ಟಲು ಕಾರಣನಾಗುತ್ತಾನೆ.

೬ ಶ್ರೀಮಂತರು ತಮ್ಮ ಆಶ್ರಯದಲ್ಲಿರುವವರಿಗೆ ಅವರ ಕೌಟುಂಬಿಕ ಶುಭಕಾರ್ಯಗಳಲ್ಲಿ ತಮ್ಮ ಬಂಗ್ಲೆ, ಕುದುರೆ, ಬಂಡಿ, ಪಾತ್ರೆ, ಜಮ್‌ಖಾನೆ, ಗುಡಾರ, ಆಭರಣ ಮುಂತಾದುವುಗಳನ್ನು ಕೊಟ್ಟು ಅವರ ಶುಭಕಾರ್ಯಗಳು ಸುಸೂತ್ರವಾಗಿ ಸಾಗುವಂತೆ ಮಾಡಿ, ಅವರ ಮನಸ್ಸನ್ನು ಪ್ರಫುಲ್ಲಿತಗೊಳಿಸುವುದು ತಮ್ಮ ಕುಲಧರ್ಮವೆಂದು ತಿಳಿಯಬೇಕು. ತಮ್ಮ ಆಚರಣೆಯನ್ನೂ ಅದರಂತೆ ಇಡಬೇಕು. ಬಡವರ ಜೀವನವು ಉಪವಾಸ-ವನವಾಸ, ಬೇನೆ-ಬೇಸರಿಕೆಗಳಿಲ್ಲದೆ ಸುಖದಿಂದ ಸಾಗಿದರೆ ಮಾತ್ರ ಶ್ರೀಮಂತರು ಬಂಗಾರದ ತಟ್ಟೆಯಲ್ಲಿ ಉಂಡರೂ ಅತ್ತ ಕಡೆ ಬಡವರು ಕಣ್ಣು ಹೊರಳಿಸಿ ನೋಡುವುದಿಲ್ಲ. ಇಷ್ಟೇ ಅಲ್ಲ, ಜನತೆಯ ಬಹು ಭಾಗವು ಶ್ರೀಮಂತರನ್ನು ಸರಿಪಡಿಸಬೇಕೆಂಬ ಗೋಜಿಗೂ ಹೋಗಬಯಸುವುದಿಲ್ಲ.

೭ ಶ್ರೀಮಂತರ ನಡತೆ ಹೀಗಿದ್ದರೆ ಮಾತ್ರ, ತಾವು ಈ ಧನದ ಸಂರಕ್ಷಕರೆಂದು ತಿಳಿದು ಅವರು ಈ ಧನದ ಸದ್ವಿನಿಯೋಗ ಮಾಡುತ್ತಿರುವರೆನ್ನಬಹುದು. ಹೀಗಿದ್ದರೂ ಅವರಿಗೆ ಧನದಾಸೆ ಇರುವುದೇ ಇಲ್ಲ ಎನ್ನಲಾಗದು. ಆದರೂ ಈ ಧನವು ಪ್ರಜೆಗಳಿಗೆ ಕೇಡು ಬಗೆಯದೆ, ಅವಶ್ಯಕತೆಯಲ್ಲಿ ಉಪಯೋಗಕ್ಕೆಂದು ಕೂಡಿಟ್ಟ ಧನ-ಸಂಗ್ರಹವಾಗುವುದು.

೮ ಇಂಥ ಪರಿಸ್ಥಿತಿ ಇದ್ದ ಕಡೆಯಲ್ಲಿ ಸಾಮ್ಯವಾದಿಗಳ ಪ್ರಚಾರಕ್ಕೆ ಮನಸೋತು ಜನರು ಶ್ರೀಮಂತರನ್ನು ನಾಶ ಮಾಡತೊಡಗುವುದಿಲ್ಲ.

೯ ಹೀಗೆ ಸರಳವಾದ, ಆಡಂಬರರಹಿತವಾದ, ಸಂಯಮೀ ಜೀವನವನ್ನು ನಡೆಸಲಾರಂಭಿಸಿದವರು ಶ್ರೀಮಂತರಿದ್ದರೂ ಪ್ರಜೆಗಳಿಗೆ ಪೂಜ್ಯರು.

## ೬ ಸಾವುಕಾರಿಕೆ

೧ ಹಣವನ್ನು ಕಡಮೆ ಬಡ್ಡಿಗೆ ಪಡೆದುಕೊಂಡು ಹೆಚ್ಚು ಬಡ್ಡಿ ಬರುವಂತೆ ಉದ್ಯೋಗದಲ್ಲಿ ತೊಡಗಿಸುವುದಕ್ಕೆ ಸಾವುಕಾರಿಕೆ ಎನ್ನುವರು. ಸಮಾಜದ ಹಿತಕ್ಕೆ ಅತ್ಯಂತ ಅವಶ್ಯವಾದ ಸಾವುಕಾರಿಕೆ ಇದಲ್ಲ.

೨ ಪರದೇಶೀ ವ್ಯಾಪಾರಿಗಳ ದಲಾಲ್‌ತನ, ಒಕ್ಕಲಿಗರ ಮತ್ತು ಇತರ ಉದ್ಯೋಗಿಗಳ ಭೂಮಿ, ಸ್ಥಿರ ಚರ ಸೊತ್ತು, ತೀರ ಹೆಚ್ಚೆಂದರೆ ಪರ ರಾಜ್ಯಗಳನ್ನು ಮೆಲ್ಲಮೆಲ್ಲನೆ ಅಪಹರಿಸುವ ಹಂಚಿಕೆ, ಇವೆಲ್ಲಾ ಇಂದು ಪ್ರಪಂಚದಲ್ಲಿ ನಡೆದಿರುವ ಸಾಹುಕಾರಿಕೆಯ ಚಿಕ್ಕ ದೊಡ್ಡ ಪ್ರಯತ್ನಗಳು. ಹೆಚ್ಚಿನ ಬಡ್ಡಿಯ ಆಸೆಯಿಂದ ತನ್ನ ದೇಶದ ಬಡವರನ್ನು ದುರ್ಲಕ್ಷಿಸಿ ಪರದೇಶಗಳಲ್ಲಿ ಹಣವನ್ನು ತೊಡಗಿಸುವ ಇಂತಹ ಸಾವುಕಾರಿಕೆಯ ರೀತಿ ಹುಟ್ಟಿದ್ದು ಯುರೋಪು, ಅಮೇರಿಕೆಯಂತಹ ದೇಶಗಳಲ್ಲಿ. ಈ ಪದ್ಧತಿಯಿಂದ ಆ ಶ್ರೀಮಂತ ದೇಶಗಳಲ್ಲಿಯೂ ಕ್ಲೇಶಗಳು ಕೊನೆ ತನಕ ಉಳಿಯುವಂತಾಗಿದೆ.

೩ ವ್ಯವಹಾರದಲ್ಲಿ ಸುಳ್ಳಾಡಿದರೆ ದೋಷವಿಲ್ಲವೆಂದು ಭಾವಿಸುವುದು ಭಯಂಕರವಾದ ಅಧರ್ಮ.

೪ ಅಶಿಕ್ಷಿತ ಸರಳ ನಂಬಿಗಸ್ತ ಜನರನ್ನೂ ವಿಲಾಸಿಗಳಾದ ಶ್ರೀಮಂತರನ್ನೂ ರಾಜರನ್ನೂ ದುಂದುಗಾರರನ್ನಾಗಿ ಮಾಡಿ ಅವರಿಗೆ ಚಟಗಳನ್ನಂಟಿಸಿ ಸಾಲಗಾರರನ್ನಾಗಿ ಮಾಡುವುದು, ವ್ಯಾಪಾರದಲ್ಲಿ ಮೋಸ ಮಾಡುವುದು, ಸುಳ್ಳು ಲೆಕ್ಕ ಇಡುವುದು, ಸುಳ್ಳು ಕಾಗದ-ಪತ್ರಗಳನ್ನು ಹುಟ್ಟಿಸುವುದು ಸಾವುಕಾರಿಕೆಯಲ್ಲ. ಅದು ಧಗಧಗಿಸುವ ಪಾಪ, ಹಿಂಸೆ.

೫ ಇಂಥ ಅಧರ್ಮದ ಸಾವುಕಾರಿಕೆಯಿಂದ ಹೆಚ್ಚುವುದು ಧನವಲ್ಲ, ಅನರ್ಥ.

೬ ಜನರು ತಮ್ಮ ಧನವನ್ನು ಉದ್ಯೋಗಗಳಿಗೆ ನೆರವಾಗುವ ರೀತಿಯಲ್ಲೇ ಇಡಬೇಕು. ಅದನ್ನು ಸ್ವದೇಶದ ಉದ್ಯೋಗಗಳಲ್ಲೇ ತೊಡಗಿಸಬೇಕು. ಇದರಿಂದ ಲಾಭವು ಹೆಚ್ಚಾಗಿ ಹಣವು ದ್ವಿಗುಣಿತವಾದರೆ ಅದರ ಉಪಯೋಗವು ಸ್ವದೇಶದ ಸಾರ್ವಜನಿಕ ಕಾರ್ಯಗಳಿಗಾಗಿ ಮೀಸಲಿರಬೇಕು. ಹಣದ ಬಡ್ಡಿಯಿಂದಲೆ ಸಾರ್ವಜನಿಕ ಕಾರ್ಯಗಳು ಜರುಗಬೇಕೆಂಬ ವಿಚಾರ ಯಾವಾಗಲೂ ಸರಿಯಾದುದಲ್ಲ. ಏಕೆಂದರೆ ಈ ಹಣದ ಉಪಯೋಗವು ಹೆಚ್ಚಾಗಿ ಸಾರ್ವಜನಿಕ ಕಾರ್ಯಗಳಿಗಾಗುವ ಬದಲು ಹೆಚ್ಚು ಬಡ್ಡಿಯನ್ನು ದೊರಕಿಸುವ ವ್ಯಕ್ತಿಯ ಬೆಳವಣಿಗೆಗೆ ಆಗುತ್ತದೆ.

೭ ಸಾಲದಿಂದ ಕೌಟುಂಬಿಕ ಕಾರ್ಯಗಳನ್ನು ಸಾಗಿಸಕೂಡದೆಂಬ ಕಟ್ಟೆಪ್ಪಣೆ ಇರಬೇಕು. ಆ ಕಾರ್ಯಗಳು ತೀರ ಕಡಮೆ ವೆಚ್ಚದಲ್ಲಿ ಸಾಂಗವಾಗುವಂತೆ ಸಮಾಜದ ಪದ್ಧತಿಗಳು ರೂಪುಗೊಳ್ಳಬೇಕು. ಹೀಗಿದ್ದರೂ ಬೇನೆ ಬೇಸರಿಕೆ, ಅನುವು ಆಪತ್ತು, ಅಥವಾ ಮದುವೆ ಮುಂಜಿಗಳಿಗಾಗಿ ಅಕಸ್ಮಾತ್ ಕೊಂಚ

ಹಣವು ಬೇಕಾದರೆ ಬಡ್ಡಿಯಿಲ್ಲದೆ ಗೆಳೆತನದ ನಂಬಿಗೆಯ ಆಧಾರದಿಂದ ಸಮಾಜದಿಂದಲೇ ಸಿಕ್ಕಬೇಕು. ಅಂಗಡಿಕಾರನು ಮನೆತನಕ್ಕೆ ಬೇಕಾದ ಪದಾರ್ಥಗಳನ್ನು ಕೊಟ್ಟರೆ, ಮೇಲ್ಕಾಣಿಸಿದ ಕೌಟುಂಬಿಕ ಶುಭಕಾರ್ಯಗಳಲ್ಲಿ ಪದಾರ್ಥಗಳನ್ನು ಕೊಟ್ಟು ನೆರವಾದರೆ, ಅವುಗಳ ಮೇಲೆ ಬಡ್ಡಿಯನ್ನು ಪಡೆಯು ವುದು ಯೋಗ್ಯವಲ್ಲ.

೮ ಸದ್ಯದ ಪರಿಸ್ಥಿತಿಯಲ್ಲಂತೂ ಇಂಥ ಸಂದರ್ಭಗಳಲ್ಲಿ ಕೊಟ್ಟ ಸಾಲಕ್ಕೆ ಬಹು ಹೆಚ್ಚು ಬಡ್ಡಿ ಸಿಕ್ಕಒಲ್ಲದು. ಆದ್ದರಿಂದ ಜನರಿಗೆ ಚಟಗಳನ್ನು ಕಲಿಸಿ, ಸಲ್ಲದ ವೆಚ್ಚಗಳಲ್ಲಿ ಮುಳುಗಿಸಿ, ಅವರಿಂದ ಹೆಚ್ಚು ಬಡ್ಡಿಯನ್ನು ಸೆಳೆಯಲು ಸಾವುಕಾರರಿಗೆ ಎಡೆಯಾಗಿದೆ.

೯ ಇನ್ನೊಂದು ಕಡೆಯಿಂದ, ವ್ಯಾದೆಯ ಮತ್ತು ದಿವಾಳಿಯ ಕ್ಯಾದೆಗಳು ಪ್ರಜರ ನೈತಿಕ ಭಾವನೆಯನ್ನು ಕೆಡಿಸಲು ಹೆಚ್ಚು ನೆರವಾಗಿವೆ. ಈ ಕ್ಯಾದೆಗಳು ದಿವಾಳಿಯಾಗುವ ಬುದ್ಧಿಯನ್ನೂ, ಗುತ್ತಿಗೆಯ ವ್ಯಾಪಾರದ ಪದ್ಧತಿಯನ್ನೂ, ಹಿಂತಿರುಗಿ ಕೊಡುವ ಬುದ್ಧಿ ಇಲ್ಲದೆ ಸಾಲಮಾಡುವ ಪ್ರವೃತ್ತಿಯನ್ನೂ ಬೆಳೆಸು ತ್ತವೆ.

೧೦ ಹೀಗೆ ಒಕ್ಕಲಿಗರ ಮತ್ತು ಸಾವುಕಾರರ ಸಂಬಂಧವು ಇಲಿ ಬೆಕ್ಕು ಗಳಂತೆ ಆಗಿದೆ– ಅಥವಾ ಒಬ್ಬರು ಮತ್ತೊಬ್ಬರನ್ನು ಮೋಸಗೊಳಿಸಲು ಹೆಣಗು ತ್ತಿರುವ ಶತ್ರುಗಳಂತೆ ಆಗಿದೆ. ಒಬ್ಬರು ಇನ್ನೊಬ್ಬರ ಹಿತವನ್ನು ಸಾಧಿಸಬೇಕು; ಸಾವುಕಾರನು ಒಕ್ಕಲಿಗರ ಉದ್ಯೋಗಗಳು ಊರ್ಜಿತವಾಗುವ ದೃಷ್ಟಿಯಿಂದ ನೆರವಾಗಲು ಬಯಸಬೇಕು; ತೆಗೆದುಕೊಂಡ ಸಾಲವನ್ನು ಸರಿಯಾದ ಕಾಲ ದಲ್ಲಿ ಮುಟ್ಟಿಸುವುದು ತಮ್ಮ ಕುಲಧರ್ಮವೆಂದು ಜನರು ತಿಳಿಯಬೇಕು. ಈ ತರದ ಸಂಬಂಧವು ಪೀಳಿಗೆಯಿಂದ ಪೀಳಿಗೆಗೆ ನಡೆದುಬರಬೇಕು. ಆದರೆ ಈಗ ಇಂಥ ಸಂಬಂಧ ಉಳಿದಿಲ್ಲ.

೧೧ ಸಾವುಕಾರ ಮತ್ತು ಸಾಲಗಾರನ ಸ್ಥಿತಿಯು ಹೇಗೆ ಇರುವುದೊ, ಹಾಗೆಯೆ ಯಜಮಾನ ಮತ್ತು ಆಳುಮಗನ ಸ್ಥಿತಿಯೂ ಇದೆ.

## ೭ ಜೀವನ-ವೇತನ

೧ ಮನುಷ್ಯನು ಯಾವುದೆ ಪ್ರಕಾರದ ಪರಿಶ್ರಮ ಮಾಡುತ್ತಿರಲಿ, ಅವನು ಇಡೀ ದಿನ ತನ್ನ ಸಾಧನಗಳ, ಶಿಕ್ಷಣದ, ಯೋಗ್ಯವಾದ ಮತ್ತು ಪ್ರಾಮಾಣಿಕ

ಉಪಯೋಗ ಮಾಡುತ್ತಿದ್ದರೆ ಅವನಿಗೆ ಸಾಕಷ್ಟು ಕೂಲಿಯಾಗಲಿ ಜೀವನ-ವೇತನವಾಗಲಿ ದೊರೆಯಲೇಬೇಕು. ಅವನ, ಅವನನ್ನು ಅವಲಂಬಿಸಿದ ದುರ್ಬಲ ಆಶ್ರಿತರ, ಸಮಾಧಾನಕಾರಕ ಪಾಲನೆ ಪೋಷಣೆಯಾಗುವಷ್ಟು ದೊರೆತರೆ ಅದೇ ಜೀವನ-ವೇತನ.

೨ ಪರಿಶ್ರಮದ ಲೆಕ್ಕದಂತೆ ಇಡೀ ದಿನವೆಂದರೆ ಎಂಟು ಗಂಟೆ. ಹಳ್ಳಿಗಳೊಳಗಿನ ಈಗಿನ (೧೯೪೦) ಸಾಧನಗಳು, ಇರುವ ಪದ್ಧತಿ, ಜೀವನ-ಮರ್ಯಾದೆ, ಜೀವನದ ಮಟ್ಟವನ್ನು ಮೇಲಕ್ಕೇರಿಸುವ ಅವಶ್ಯಕತೆ, ಅದರಂತೆ ಪದಾರ್ಥಗಳ ಬೆಲೆ, ಮುಂತಾದುವನ್ನು ಯೋಚಿಸಲಾಗಿ, ಎಂಟು ಗಂಟೆಯ ಒಂದು ದಿನವನ್ನೂ ಗಂಟೆಗೆ ಒಂದಾಣೆ ಕೂಲಿಯನ್ನೂ ಗೊತ್ತುಮಾಡುವುದು ಯೋಗ್ಯ.

೩ ಆ ಮಟ್ಟವನ್ನು ಒಮ್ಮೆಲೆ ಮುಟ್ಟುವ ಸಾಮರ್ಥ್ಯವಿಲ್ಲದಿದ್ದರೂ ಆ ದಿಕ್ಕಿನಿಂದ ಸಾಗತಕ್ಕದ್ದೆಂಬುದನ್ನು ಲಕ್ಷಿಸಿ ನಾವು ಮುಂದೆ ಸಾಗುತ್ತ ಹೋಗಬೇಕು.

೪ ಯಾವುದೇ ಬಗೆಯಾಗಿ ಪರಿಶ್ರಮಿಸುವ ಪ್ರತಿಯೊಬ್ಬನ ಕೂಲಿ ಸಮಾನವಾದಾಗಲೆ ನಾವು ಆದರ್ಶ ಸ್ಥಿತಿಯನ್ನೂ, ವರ್ಣಧರ್ಮದ ಪರಿಪೂರ್ಣಾವಸ್ಥೆಯನ್ನೂ ಮುಟ್ಟಿದಂತಾಗುವುದು. ಆದರೆ ನಿಕಟ-ಭವಿಷ್ಯದಲ್ಲಿ ಆ ಸ್ಥಿತಿಯನ್ನು ಮುಟ್ಟುವ ಲಕ್ಷಣಗಳಿಲ್ಲ. ಆದುದರಿಂದ ಆ ಆದರ್ಶವನ್ನು ಕಣ್ಣುಮುಂದಿಟ್ಟುಕೊಂಡು, ಸಾಧ್ಯವಿದ್ದಷ್ಟು ಮುಂದೆ ಸಾಗುವ ಧೋರಣೆಯನ್ನು ನಾವು ಸ್ವೀಕರಿಸಲೇಬೇಕು.

## ೮ ಕೂಲಿಕಾರರ ಪ್ರಶ್ನೆಗಳು

೧ ಜೀವನವನ್ನು ಕುರಿತ ನಮ್ಮ ತಪ್ಪು-ವಿಚಾರಗಳು ಕೂಲಿಕಾರರ ಪ್ರಶ್ನೆಯನ್ನು ಹೆಚ್ಚು ಜಟಿಲಗೊಳಿಸಿವೆ.

೨ ಕೆಳಗಿನವು ತಪ್ಪು ವಿಚಾರಗಳು, ತಪ್ಪು ದೃಷ್ಟಿ-ಬಿಂದುಗಳು:

(ಅ) ಮನುಷ್ಯನು ಬಿಡುವನ್ನೇ ಬಯಸುವುದು, ಕೆಲಸವು ಒಂದು ಹೊರೆಯೆಂದು ತಿಳಿಯುವುದು.

(ಆ) ಮನುಷ್ಯನ ಅಧ್ಯಾತ್ಮಿಕ ಉನ್ನತಿಗೆ ಬಿಡುವು ಅತ್ಯಗತ್ಯವೂ, ಶಾರೀರಿಕ ಶ್ರಮವು ಅಧ್ಯಾತ್ಮಿಕ ಉನ್ನತಿಗೆ ವಿರೋಧಿಯೂ ಆಗಿದೆ.

(ಇ) ತೀರ ಕಡಮೆ ಕೆಲಸಮಾಡಿ ಅತ್ಯಂತ ಹೆಚ್ಚು ಸುಖವನ್ನು ಪಡೆಯು ವುದೇ ಶ್ರಮ-ವಿಭಾಗದ ಧ್ಯೇಯ.

(ಈ) ಕೂಲಿಕಾರನ ಸ್ವಾರ್ಥಕ್ಕಿಂತ ಒಡೆಯನ ಸ್ವಾರ್ಥವು ತೀರ ಭಿನ್ನ ವಾಗಿದೆ.

೩ ಮೇಲಿನ ಕಾರಣಗಳಿಂದ ಕೂಲಿಕಾರರ ಎದುರು ಕೀಳು ತರದ ಗುರಿ ಯನ್ನಿಡುವ ಪ್ರಯತ್ನವು ನಡೆಯುತ್ತಿದೆ:

(ಅ) ಯಂತ್ರಗಳಲ್ಲಿ ಚನ್ನಾಗಿ ಸುಧಾರಣೆಮಾಡಿ, ಮೂರು ನಾಲ್ಕು ಗಂಟೆ ಮಾತ್ರ ದುಡಿದು, ಜೀವನಕ್ಕೆ ಅವಶ್ಯವಿದ್ದ ಎಲ್ಲ ವಸ್ತುಗಳನ್ನು ಹುಟ್ಟಿಸಿಬಿಡು ವುದು.

(ಆ) ಶ್ರೀಮಂತನನ್ನೂ ಬಂಡವಲುಗಾರರನ್ನೂ ನಾಶಪಡಿಸುವುದು.

೪ ಮೇಲಿನ ಆದರ್ಶಗಳು ಅಪರೂಪವಾಗಿ ಕೈಗೂಡಬಹುದು. ಆದರೆ ಅವು ಗಳಿಂದ ಮಾನವ-ಜಾತಿಯು ನಿಜವಾಗಿಯೂ ಸುಖಿಯಾಗುವುದೆಂಬ ಭರವಸೆ ಇಲ್ಲ.

೫ ನಿಜವಾಗಿಯೂ ನೋಡಿದರೆ ಕೂಲಿಕಾರರ, ಇಲ್ಲವೆ ಕೋಟ್ಯಾನು-ಕೋಟಿ ಜನರ ಸುಖದ ಬಗ್ಗೆ ಕೆಳಗಿನ ದೃಷ್ಟಿಯಿಂದ ಯೋಚಿಸಬೇಕು:

(ಅ) ಮನುಷ್ಯನಲ್ಲಿ ಶ್ರಮಪಡುವ ಶಕ್ತಿ ಸ್ವಾಭಾವಿಕವಾಗಿಯೆ ಇದೆ. ಆದರೆ ಅವನು, ಆ ಶಕ್ತಿಯು ಕುಗ್ಗಿಹೋಗುವಷ್ಟು, ಸ್ವತಃ ದುಡಿದು ಹೊಟ್ಟೆ ತುಂಬಿಸಿಕೊಂಡು ಹೋಗಲು ಅಯೋಗ್ಯನಾಗುವಷ್ಟು, ಯಂತ್ರಾದಿ ಬಾಹ್ಯ ಸಾಧನಗಳಿಗೆ ಅಧೀನನಾಗಿರುವಂತೆ ಮಾಡಕೂಡದು.

(ಆ) ಶಾರೀರಿಕ ಪರಿಶ್ರಮದ ಶಕ್ತಿ ಬೆಳೆಯಬೇಕು. ಕೂಲಿಕಾರನ ಶಕ್ತಿ ಯನ್ನು ಹೆಚ್ಚಿಸುವ ದೃಷ್ಟಿಯಿಂದಲೇ ಅವನ ಕೆಲಸದ ಸಮಯ, ಅವನ ಮನೆ-ಮಾರು, ಮುಂತಾದ ಅನುಕೂಲತೆಗಳ ಬಗ್ಗೆ ಯೋಚನೆ ಮಾಡಬೇಕು.

(ಇ) ಅತ್ಯಂತ ಸೂಕ್ಷ್ಮ ಶ್ರಮ-ವಿಭಾಗದ ಮೂಲಕ ಕೂಲಿಕಾರರನ್ನು ಜಡ ಯಂತ್ರದಂತೆ ಮಾಡಿ ಅವನಿಂದ ೩-೪ ಗಂಟೆ ನೀರಸವಾದ ಯಾಂತ್ರಿಕ ಕಾರ್ಯ ವನ್ನು ಮಾಡಿಸಿಕೊಂಡು, ಬಳಿಕ ಆನಂದ ಉತ್ಸಾಹಗಳ ಕಡೆಗೆ ಮನಸ್ಸನ್ನು ಹಾಕಲು ಬಿಡುವನ್ನು ಕೊಟ್ಟುಬಿಟ್ಟರೆ ಮಾನವ-ಜಾತಿಯ ಕಲ್ಯಾಣವಾಗುವು ದಿಲ್ಲ. ಕರ್ಮದಲ್ಲಿಯೆ ಆನಂದವು ದೊರೆಯುವಂತೆ, ವಿನೋದ-ಪ್ರವೃತ್ತಿಗೆ ಅಲ್ಲಿಯೆ ಇಂಬು ದೊರೆಯುವಂತೆ, ಅಧ್ಯಾತ್ಮಿಕ ಉನ್ನತಿ ಅಲ್ಲಿಯೆ ಆಗುವಂತೆ,

ಉದ್ಯೋಗ ವ್ಯವಸಾಯುಗಳನ್ನು ರಚಿಸುವ ಮಾರ್ಗಗಳನ್ನು ಹುಡುಕಬೇಕು.

(ಈ) ಮನುಷ್ಯನಿಗೆ ಕಸುಬಿನ ಕಡೆ ಪ್ರವೃತ್ತಿ ಇದ್ದ ಮೇಲೆ ಅವನಿಗೆ ಬೇರೆ ಪ್ರವೃತ್ತಿಗಳೇ ಅವಶ್ಯವಿಲ್ಲವೆಂದು, ಅಥವಾ ಬಿಡುವೇ ಬೇಡವೆಂದು ಇದರ ಅರ್ಥವಲ್ಲ. ಪ್ರತಿಯೊಬ್ಬನಿಗೂ ಯಾವುದೊಂದು ನಿರ್ದೋಷಿಯಾದ ಮನ ರಂಜನೆಯ ಪ್ರವೃತ್ತಿ ಇರುವುದು ಒಳಿತು. ಆ ಪ್ರವೃತ್ತಿಗಾಗಿ ಅವನಿಗೆ ಬಿಡುವೂ ದೊರೆಯಬೇಕು. ಆದರೆ ಈ ವಿಷಯ ಪ್ರಧಾನವಲ್ಲ, ಗೌಣ. ಬಿಡುವಿನ ವೇಳೆಯನ್ನು ಯೋಗ್ಯವಾಗಿ ಉಪಯೋಗಿಸುವಂತೆ ತಕ್ಕ ಸಂಸ್ಕಾರವು ಇನ್ನೂ ಬಹಳ ಜನರಿಗೆ ಸಿಕ್ಕಿಲ್ಲ. ಹೆಚ್ಚು ಜನರು ತಮ್ಮ ಬಿಡುವಿನ ಸಮಯವನ್ನು ನಿದ್ರೆಯಲ್ಲಿ, ಚಟಗಳಲ್ಲಿ, ಮತ್ತು ದೋಷಪೂರಿತವಾದ ಭೋಗಗಳಲ್ಲಿ ಕಳೆಯುವ ಭಯವಿರುವುದೆನ್ನಬಹುದು.

(ಉ) ಮನುಷ್ಯನು ಉಪಜೀವನಕ್ಕಾಗಿ ಕಠಿಣ ಪರಿಶ್ರಮ ಪಡಬೇಕಾಗುವುದು. ಇದು, ಸೃಷ್ಟಿಯು ಮನುಷ್ಯನ ಮೇಲೆ ಮಾಡುವ ಕೋಪವಲ್ಲ, ಅನುಗ್ರಹ. ನಮ್ಮ ಗುರಿ, ಶ್ರಮಪಡುವ ಶಕ್ತಿ ಹೆಚ್ಚುವುದರ ಕಡೆಗಿರಬೇಕೇ ಹೊರತು ಶ್ರಮಪಡದಿರುವುದರ ಕಡೆಗಿರಕೂಡದು.

(ಊ) ಯಜಮಾನನು ಕೂಲಿಕಾರರ ವ್ಯವಸ್ಥಾಪಕನಾಗಿ ಅವರವರ ಯೋಗ್ಯತೆಗೆ ತಕ್ಕಂತೆ ಕೆಲಸವನ್ನು ಕೊಡಬೇಕು. ಅದಕ್ಕೆ ಸಾಕಷ್ಟು ಕೂಲಿಯ ಜೊತೆಗೆ ಅನುಕೂಲತೆಗಳನ್ನೂ ಮಾಡಿಕೊಡಬೇಕು. ಕೂಲಿಕಾರನು ಯಜ-ಮಾನನ ಕೆಲಸವು ತನ್ನದೆಂದೇ ತಿಳಿದು ಮನಗೊಟ್ಟು ಮಾಡಬೇಕು. ಎಂದರೆ ಇಬ್ಬರ ಹಿತವೂ ಆಗುವುದು.

(ಎ) ಇದಕ್ಕಾಗಿ ಸ್ವಂತ ಭಂಡವಲು ಇರಬೇಕೊ ಇರಬಾರದೊ ಎಂಬ ಪ್ರಶ್ನೆ ಬಹಳ ಮಹತ್ವದ್ದಲ್ಲ. ಆದರೆ ಉದ್ಯೋಗದ ಮತ್ತು ವಾಣಿಜ್ಯದ ಧ್ಯೇಯದಲ್ಲಿ ಮಾತ್ರ ಪರಿವರ್ತನೆ ಅಗತ್ಯವಿದೆ.

(ಏ) ಉದ್ಯೋಗದ ಧ್ಯೇಯವು, ರೂಢವಾದ ಮತ್ತು ಹೊಸದಾಗಿ ಉತ್ಪನ್ನವಾಗುವ ಅವಶ್ಯಕತೆಗಳ ಪೂರೈಕೆಯನ್ನು ಆದಷ್ಟು ಚನ್ನಾಗಿ ಮಾಡುವುದೇ ಹೊರತು, ವ್ಯಾಪಾರವನ್ನು ಹೆಚ್ಚಿಸುವುದಕ್ಕಾಗಿ ಹೊಸ ಹೊಸ ಅವಶ್ಯಕತೆಗಳನ್ನು ಹೆಚ್ಚಿಸುವುದಲ್ಲ. ವ್ಯಾಪಾರದ ಪ್ರಯೋಜನವೂ ಇಷ್ಟೇ. ಇದರಂತೆ ನಡೆಯುವಾಗ ಎಷ್ಟೋ ಹೊಸ ವಸ್ತುಗಳು ಬೇಕಾಗುವುದೇನೋ ನಿಜ. ಆದರೆ ಈ ಧ್ಯೇಯವನ್ನು ನೆನಪಿನಲ್ಲಿಟ್ಟುಕೊಂಡರೆ, ವಾಣಿಜ್ಯವು ಹಿಂದುಳಿದವರೆನ್ನಿಸಿ

ಕೊಳ್ಳುವ ಜನರ ಅವಶ್ಯಕತೆಗಳನ್ನು ಹೆಚ್ಚಿಸುವ ಗೋಜಿಗೆ ಹೋಗಲಾರದು, ಅವರನ್ನು ಹೀರಬೇಕೆನ್ನುವ ನೀತಿಗೆ ಆಸ್ಪದ ಕೊಡಲಾರದು. ಹೀಗಾದರೆ ಮಾತ್ರ, ಕೂಲಿಕಾರರೂ ಯಜಮಾನರೂ ಅನ್ಯೋನ್ಯಾಶ್ರಯದಿಂದ ಇರ ಬಲ್ಲರು.

(ಐ) ಇಂಥ ಧ್ಯೇಯವಿರದಿದ್ದರೆ ಶ್ರೀಮಂತ ವ್ಯಕ್ತಿಯ ಬದಲು ತಂತ್ರವು, ಅಥವಾ ಜಡ-ಯಂತ್ರವು, ಎಲ್ಲರ ಯಜಮಾನನಾಗುವುದು. ಒಬ್ಬನು ಯಜ ಮಾನನು, ಇನ್ನೊಬ್ಬನು ಕೂಲಿಕಾರನಾಗುವನು. ಇದರಿಂದ ಮನುಷ್ಯನ ಸುಖವು ಹೆಚ್ಚದು.

## ೮ ಸ್ವಾವಲಂಬನವೂ ಶ್ರಮ-ವಿಭಾಗವೂ

೧ ಸ್ವಾವಲಂಬನವು ಶ್ರಮ-ವಿಭಾಗಕ್ಕೆ ವಿರೋಧಿಯಲ್ಲ. ಪರದೇಶಗಳೊಂದಿಗೆ ಔದ್ಯೋಗಿಕ ಸಂಬಂಧವನ್ನು ಇಟ್ಟುಕೊಳ್ಳಲು ಸ್ವಾವಲಂಬನವು ಅಡ್ಡಿ ಯಾಗುವುದಿಲ್ಲ. ಸಮಾಜದಲ್ಲಿರುವ ಮನುಷ್ಯನು ಸಂಪೂರ್ಣ ಸ್ವಾವಲಂಬಿ ಯಾಗುವುದು, ತನ್ನ ಎಲ್ಲ ಅವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುವುದು ಸಾಧ್ಯವಿಲ್ಲ. ಒಂದು ವೇಳೆ ಸಂಪೂರ್ಣ ಸ್ವಾವಲಂಬಿಯಾಗಿರಲು ಪ್ರಯತ್ನಿಸಿದರೆ, ಅದು ವ್ಯರ್ಥ ಹೋರಾಟವೂ ಅಹಂಕಾರವೂ ಆಗುವುದು. ಇಡೀ ಜಗತ್ತಿನೊಡನೆ ಪ್ರೇಮದಿಂದ ಇರಬೇಕೆನ್ನುವವನು ಅಹಿಂಸೆಯಿಂದ ಒಂದುಗೂಡಬೇಕೆನ್ನು ವವನು ಸ್ವಯಂಪರ್ಯಾಪ್ತ(Self-sufficient)ನಾಗುವ ಮೋಹಕ್ಕೆ ಒಳಗಾಗ ಬಾರದು.

೨ ಮನುಷ್ಯನು ತಾನೇ ಪೂರೈಸಿಕೊಳ್ಳಬಹುದಾದ ಎಷ್ಟೋ ಅವಶ್ಯ-ಕತೆಗಳಿವೆ. ಸೃಷ್ಟಿಯ ಅನುಕೂಲತೆಗಳಿದ್ದಲ್ಲಿ ಇಂಥ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅವನು ಸ್ವಾವಲಂಬಿಯಾಗುವುದು ದೋಷವಲ್ಲ. ಇಂಥ ಅವಶ್ಯಕತೆಗಳ ಪೂರೈಕೆಗಾಗಿ ಅನ್ಯರ ಪರಿಶ್ರಮವನ್ನು ಬಯಸಿ ಅದನ್ನು ಉಪಯೋಗಿಸಿಕೊಳ್ಳಬೇಕೆಂದೂ ಅದಕ್ಕಾಗಿ ಅವರೊಡನೆ ಆರ್ಥಿಕ ಸಂಬಂಧ ವನ್ನು ಇಡಬೇಕೆಂದೂ ನಿಯಮವಿಲ್ಲ. ಉದಾಹರಣೆಗೆ: ತನ್ನ ಬಟ್ಟೆಗಳನ್ನು ಅಗಸರಿಂದಲೇ ಒಗೆಯಿಸಿಕೊಳ್ಳುವುದು, ಕಕ್ಕಸುಗಳನ್ನು ಭಂಗಿಯವನಿಂದಲೇ ಸ್ವಚ್ಛ ಮಾಡಿಸಿಕೊಳ್ಳುವುದು, ನಾಪಿಕನಿಂದಲೆ ಕ್ಷೌರ ಮಾಡಿಸಿಕೊಳ್ಳುವುದು, ಮತ್ತು ಊಟಕ್ಕಾಗಿಯೂ ಆಹಾರಕ್ಕಾಗಿಯೂ ಖಾನಾವಳಿಯನ್ನೇ ಅವಲಂಬಿ

ಸುವುದು. ಇವುಗಳಲ್ಲಿ ನಾವು ಸ್ವಾವಲಂಬಿಯಾಗಬಲ್ಲೆವು.

೩ ದೇಶದ, ಮತ್ತು ಜನರ ವ್ಯವಹಾರಕ್ಕೂ ಇದೇ ನಿಯಮ ಅನ್ವಯಿಸು ವುದು. ಹಿಂದುಸ್ತಾನದಲ್ಲಿ ಸಾಕಷ್ಟು ಧಾನ್ಯವೂ ಹತ್ತಿಯೂ ಬೆಳೆಯುತ್ತದೆ. ಆದ್ದರಿಂದ ಅನ್ನ ವಸ್ತ್ರಗಳ ವಿಷಯದಲ್ಲಿ ಸ್ವಾವಲಂಬಿಯಾಗಿ ಸ್ವಯಂಪರ್ಯಾಪ್ತ ವಾಗುವುದರಲ್ಲಿ ಅದಕ್ಕೆ ಅಭಿಮಾನವಿರಬೇಕು. ಇದರ ಅರ್ಥ, ಅನ್ಯ ದೇಶ ಗಳೊಡನೆ ಔದ್ಯೋಗಿಕ ಸಂಬಂಧವನ್ನು ಇಡಲು ಇಚ್ಛಿಸಕೂಡದೆಂದು ಅಲ್ಲ.

೪ ಇದೇ ತೆರನಾಗಿ, ಹಿಂದುಸ್ತಾನದಲ್ಲಿ ವಿಕಾಸಹೊಂದಲು ನೈಸರ್ಗಿಕ ಅನುಕೂಲತೆಗಳುಳ್ಳ ಎಲ್ಲ ಉದ್ಯೋಗಗಳ ಬೆಳವಣಿಗೆಗೂ ಉಪಾಯಗಳನ್ನು ಕೈಕೊಂಡರೆ ದೋಷವಾವುದೂ ಇಲ್ಲ. ಇಂತಹ ಆರ್ಥಿಕ ಯೋಜನೆಗಳನ್ನು ಮಾಡದೆ ಪ್ರಜೆಗಳ ಸುಖವನ್ನು ಬಯಸುವುದು ನಿರರ್ಥಕ.

೫ ಹಿಂದುಸ್ತಾನದ ಧಾನ್ಯವನ್ನು ಪರದೇಶಕ್ಕೆ ಕಳಿಸಿ ಅಲ್ಲಿಂದ ರೊಟ್ಟಿ ಗಳನ್ನು ತರಿಸಿಕೊಳ್ಳುವುದು – ಎಳ್ಳು ನೆಲಗಡಲೆಯನ್ನು ಕಳಿಸಿ ಎಣ್ಣೆ ತರಿಸಿ ಕೊಳ್ಳುವುದು, ಹತ್ತಿಯನ್ನು ಕಳಿಸಿ ಬಟ್ಟೆ ತರಿಸಿಕೊಳ್ಳುವುದು ಶುದ್ಧ ಅಯೋ ಗ್ಯವು. ಇದು ದೇಶದೇಶಾಂತರದ ಶ್ರಮ ವಿಭಾಗ, ದೇಶದೇಶಾಂತರದ ಸಹ ಕಾರಪದ್ಧತಿ, ಲ್ಯಾಂಕೆಶಯರಿನಂಥ ಕಲ್ಲಿದ್ದಲಿಯ ಗಣಿಯೂ ಆರ್ದ್ರ ಹವೆಯೂ ಉಳ್ಳ ಪ್ರದೇಶಗಳಲ್ಲಿ ಮಾತ್ರ ಬಟ್ಟೆ ತಯಾರಿಸಲು ನೈಸರ್ಗಿಕ ಅನುಕೂಲತೆ ಗಳಿವೆ, ಎಂದು ಹೇಳಿ ಅಲ್ಲಿಯೇ ಬಟ್ಟೆಗಳನ್ನು ತಯಾರಿಸಿ ತರಿಸಿಕೊಳ್ಳುವುದು ಶ್ರಮ-ವಿಭಾಗತತ್ವದ, ಮತ್ತು ಸಹಕಾರ-ತತ್ವದ ದುರುಪಯೋಗ.

## ೧೦ ಸ್ವದೇಶಿ

೧ ಮೂಲವಸ್ತು ಎಲ್ಲಿ ಹುಟ್ಟುವುದೋ, ಅದಕ್ಕೆ ಸಂಬಂಧಪಟ್ಟ ಉದ್ಯೋಗ ಗಳನ್ನು ಅಲ್ಲಿಯೇ ನಡೆಯಿಸಬೇಕೆನ್ನುವುದೇ ಪ್ರತಿಯೊಂದು ದೇಶದ ಆರ್ಥಿಕ ನೀತಿಯಾಗಿರಬೇಕು. ಇದಕ್ಕೆ ಆರ್ಥಿಕ ದೃಷ್ಟಿಯಿಂದಲೂ ರಾಜಕೀಯ ದೃಷ್ಟಿ ಯಿಂದಲೂ 'ಸ್ವದೇಶಿ ಚಳವಳಿ' ಎನ್ನುವರು.

೨ ಮೂಲವಸ್ತು ಪರದೇಶಕ್ಕೆ ಹೋಗಿ, ಅಲ್ಲಿಂದ ಸಿದ್ಧ ಪದಾರ್ಥಗಳ ರೂಪದಲ್ಲಿ ಸ್ವದೇಶಕ್ಕೆ ಮರಳಿ ಬರುವ ಪದ್ಧತಿ ಆರ್ಥಿಕ ದೃಷ್ಟಿಯಿಂದ ಎಷ್ಟೇ ಲಾಭಕರವೆನಿಸಿದರೂ ಈ ದೃಷ್ಟಿಕೋನದಲ್ಲಿ ತಪ್ಪಾಗಿರುವ ಸಂಭವವಿದೆ. ಅನ್ಯಾಯ, ಅಧರ್ಮ, ಅತ್ಯಾಚಾರಗಳು ನಡೆಯುವ ಸಂದರ್ಭವೂ ಇದೆ. ಇಲ್ಲ

ದಿದ್ದರೆ ಆರ್ಥಿಕ ಲಾಭ ಅಸಂಭವವು.

೩ 'ಫ್ರೀ ಟ್ರೇಡ್', ಅರ್ಥಾತ್ ಸುಂಕ-ರಹಿತ ಮುಕ್ತ ವ್ಯಾಪಾರವೆಂದು ಯಾವುದಕ್ಕೆ ಇಂಗ್ಲಂಡು ಹೆಸರಿಟ್ಟಿರುವುದೋ ಅದು ನಿಜವಾಗಿಯೂ ಹಾಗಿಲ್ಲ. ಏಕೆಂದರೆ ಅದು ತನ್ನ ದೇಶದ ಉದ್ಯೋಗಗಳು ಚಿರಂಜೀವಿಯಾಗುವುದಕ್ಕಾಗಿ, ಪರದೇಶಗಳ ಉದ್ಯೋಗಗಳು ನಷ್ಟವಾಗುವುದಕ್ಕಾಗಿ ಇಂಗ್ಲಂಡು ಸುಂಕ ಹೇರುವುದನ್ನು ತೊರೆದು ಸೈನ್ಯ-ಬಲವನ್ನೂ ರಾಜಕೀಯ ಅಧಿಕಾರವನ್ನೂ ಕುಟಿಲ ನೀತಿಯನ್ನೂ ಉಪಯೋಗಿಸುವುದು. ಇದು ಸ್ವದೇಶೀ ನೀತಿಯ ಅನ್ಯಾಯದ, ಅಥವ ಸ್ವರೂಪವು.

೪ ಆರ್ಥಿಕ ದೃಷ್ಟಿಯಿಂದ ಸ್ವದೇಶಿ, ಬಹಿಷ್ಕಾರ ಇವೆರಡರಲ್ಲಿ ಭೇದವೇನೂ ಇಲ್ಲ. ಕೋಟ್ಯಾನುಕೋಟಿ ಜನರ ನಿರ್ವಾಹ ಯಾವ ವಸ್ತುಗಳಿಂದ ಆಗುತ್ತಿರುವುವೋ ಅಂಥವುಗಳನ್ನು ಪರದೇಶಗಳಿಂದ ತರಿಸದಿರುವುದು ಬಹಿಷ್ಕಾರವೆನಿಸುವುದು. ಈ ಬಹಿಷ್ಕಾರವು ಒಂದು ವಿಶಿಷ್ಟ ದೇಶದೊಡನೆ ಮಾತ್ರ ಇರದೆ ಸರ್ವದೇಶಗಳೊಡನೆ ನಡೆಯುವುದೇ ಸ್ವದೇಶಿ.

೫ ಒಂದು ವಿಶಿಷ್ಟ ದೇಶದ ವಿರುದ್ಧವಾಗಿ ಸಾರಲಾದ ಬಹಿಷ್ಕಾರ ರಾಜಕೀಯ ಬಹಿಷ್ಕಾರವೆನಿಸುವುದು. ಆದ್ದರಿಂದ ಈ ಪ್ರಕರಣದಲ್ಲಿ ಅದನ್ನು ಕುರಿತು ಯೋಚಿಸುವುದು ಅವಶ್ಯವಲ್ಲ.

## ೧೧ ಯಾಂತ್ರಿಕ ಸಾಧನಗಳು

೧ ಭಾರತೀಯ ಅರ್ಥಶಾಸ್ತ್ರದ ದೃಷ್ಟಿಯಿಂದ ಯಾಂತ್ರಿಕ ಸಾಧನಗಳು, ಮತ್ತು ಅವುಗಳಲ್ಲಿ ಮಾಡತಕ್ಕ ಸುಧಾರಣೆಗಳು, ಎಂದು ಎರಡು ಭಾಗ ಮಾಡಬಹುದು: (೧) ಪರಿಶ್ರಮಿಸುವ ಮನುಷ್ಯನ ಮತ್ತು ಪಶುವಿನ ಸ್ನಾಯುಗಳಿಗೆ ಕಡಮೆ ಶ್ರಮವಾಗಬೇಕು, ಸಮಯದ ಉಳಿತಾಯವಾಗಬೇಕು, ಎಂಬ ದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡು ಯೋಜಿಸಲ್ಪಟ್ಟ ಯಂತ್ರಗಳು ಮತ್ತು ಅವುಗಳ ಸುಧಾರಣೆಗಳು. ಉದಾಹರಣೆಗಾಗಿ: ಗಡಗಡೆ, ರಾಟೆ, ಬೈಸಿಕಲ್ಲು, ಹೊಲಿಗೆ-ಯಂತ್ರ, ಬೀಸುವ ಕಲ್ಲು, ಚಕ್ಕಡಿ–ಗಾಡಿ ಮುಂತಾದುವು ಸವೆದು ಹೋಗುವುದನ್ನು ಕಡಮೆ ಮಾಡಲು ಆದ ಸುಧಾರಣೆಗಳು. ಉದಾಹರಣೆಗಾಗಿ: ಸವೆಗುಂಡು (Ball bearing), ರಾಜ-ಮಾರ್ಗ, ರೈಲು-ಮಾರ್ಗ, ಇತ್ಯಾದಿ. ಮತ್ತು (೨) ಶ್ರಮಜೀವಿಗಳ ಮತ್ತು ಶ್ರಮ ಮಾಡುವ ಪಶುಗಳ ಸ್ಥಾನಗಳನ್ನು

ಆಕ್ರಮಿಸುವುದಕ್ಕಾಗಿ, ಇಲ್ಲವೆ ಕೂಲಿಕಾರರ ಮತ್ತು ಪಶುಗಳ ಸಂಖ್ಯೆಯನ್ನು ಕಡಮೆಮಾಡುವುದಕ್ಕಾಗಿ, ಕೂಲಿಕಾರನ ಬುದ್ಧಿಚಾತುರ್ಯವನ್ನೂ ಅವನ ಶಕ್ತಿಯ ಉಪಯೋಗವನ್ನೂ ಮಾಡಿಕೊಳ್ಳುವುದನ್ನು ಬಿಟ್ಟು ಅವನನ್ನು ಯಂತ್ರದಂತೆ ದುಡಿಸಿಕೊಳ್ಳುವುದಕ್ಕಾಗಿ ಮಾಡಿದ ಯಂತ್ರಗಳು; ಉದಾಹರಣೆಗಾಗಿ: ಬತ್ತದ ಹಿಟ್ಟಿನ ಗಿರಣಿ, ಎಣ್ಣೆಯ ಸಕ್ಕರೆಯ ಕಾರ್ಖಾನೆಗಳು; ನೂಲಿನ, ಬಟ್ಟೆಯ ಗಿರಣಿಗಳು; ಮೋಟಾರು, ಉಗೆ-ಬಂಡಿ ಮೊದಲಾದ ವಸ್ತು ವಾಹನಗಳು; ಟ್ರಾಕ್ಟರು, ವಿದ್ಯುತ್ತಿನಿಂದ ನಡೆಯುವ ನೀರಿನ ನಲ್ಲಿಗಳು, ಸೂಕ್ಷ್ಮ ಶ್ರಮ ವಿಭಾಗದಿಂದ ಹುಟ್ಟಿದ ಯಂತ್ರ ಮುಂತಾದುವು.

೨ ಮೊದಲಿನ ತರದ ಯಾಂತ್ರಿಕ ಸಾಧನಗಳೂ ಸುಧಾರಣೆಗಳೂ ಅಗತ್ಯವಾಗಿ ಬೇಕಾದುವೇ. ಇವುಗಳಿಂದ ಕೂಲಿಕಾರರ ಹಾಗೂ ಪಶುಗಳ ಸಂಖ್ಯೆ ಕಡಮೆಯಾಗಬಹುದು. ಆದರೆ ಅದು ತೀರ ಅಲ್ಪ.

೩ ಎರಡನೆ ತರದ ಯಂತ್ರಗಳನ್ನೂ ಅವುಗಳ ಸುಧಾರಣೆಗಳ ಉಪಯೋಗವನ್ನೂ ಹೆಚ್ಚು ವಿವೇಕದಿಂದ, ಎಚ್ಚರದಿಂದ, ಮಾಡಬೇಕಾಗುವುದು. ಶಸ್ತ್ರಾಸ್ತ್ರ ಮದ್ದು-ಗುಂಡುಗಳನ್ನು ಮಾಡಲಿಕ್ಕೂ ಉಪಯೋಗಿಸಲಿಕ್ಕೂ ಹೇಗೆ ಸರಕಾರದ ಅಪ್ಪಣೆ ಬೇಕಾಗುವುದೊ, ಹೇಗೆ ಸರಕಾರದ ಅಂಕುಶವು ಇವುಗಳ ಮೇಲಿರುವುದೊ, ಹಾಗೆಯೆ ಇವುಗಳನ್ನು ಯಾರು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಳ್ಳಬಹುದೆನ್ನುವ ಬಗೆಗೂ ಪ್ರಜಾಸತ್ತಾತ್ಮಕ ಸರಕಾರದ ಕಟ್ಟಳೆ ಇರಬೇಕು.

೪ ಈ ಕೆಳಗಿನ ಪರಿಸ್ಥಿತಿಯಲ್ಲಿ ಎರಡನೆ ತರದ ಯಂತ್ರಗಳ ಉಪಯೋಗ ದೋಷವಲ್ಲ:

(ಅ) ಕೆಲಸವು ಹೆಚ್ಚು ಇದ್ದು ಮಾಡುವವರು ಕಡಮೆ ಇರುವಲ್ಲಿ, ಅಥವಾ ದುಡಿಯುವವರು ಸಿಕ್ಕದಿರುವಲ್ಲಿ, ಸಿಕ್ಕರೂ ಅವರನ್ನು ಕೆಲಸಕ್ಕೆ ತೊಡಗಿಸಲು ಬರದಿರುವಲ್ಲಿ. ಉದಾಹರಣೆಗೆ: ಉಗೆ-ಹಡಗುಗಳ ಮೇಲೆ.

(ಆ) ಅಕಸ್ಮಾತ್ ಸಂಕಟಗಳು ಉದ್ಭವಿಸಿದಲ್ಲಿ, ಕೆಲಸವನ್ನು ಅತ್ಯಂತ ತ್ವರೆಯಿಂದ ಮಾಡುವುದು ಆವಶ್ಯವಿದ್ದು ಯಾಂತ್ರಿಕ ಸಾಧನೆಗಳ ಬದಲು ಅಸಂಖ್ಯ ಮನುಷ್ಯರನ್ನು ನಿಯಮಿಸುವುದರಿಂದ ಅವ್ಯವಸ್ಥೆಯೂ ಸಡಿಲೂ ತೊಂದರೆಗಳೂ ಹೆಚ್ಚುವಂತಹ ಪರಿಸ್ಥಿತಿಯಲ್ಲಿ. ಉದಾಹರಣೆಗೆ: ಬೆಂಕಿ ನೊಂದಿಸುವಾಗ, ಬರಗಾಲ ಮುಂತಾದ ದೈವೀ-ಪ್ರಕೋಪಗಳಿಂದ ಜನರನ್ನು ರಕ್ಷಿಸುವಾಗ, ಪೀಡಿತರಿಗೆ ಧಾನ್ಯಾದಿಗಳನ್ನು ತಲ್ಪಿಸುವಾಗ.

(ಇ) ಸಹಯೋಗಿ (ಜೋಡು) ಉದ್ಯೋಗಗಳಿಗೆ ಎಡೆಕೊಡುವಂಥ, ಅಥವಾ ಅವುಗಳನ್ನು ಊರ್ಜಿತ ಸ್ಥಿತಿಗೆ ಒಯ್ಯುವಂಥ ಮತ್ತು ನಾಶವಾಗ ದಂಥ ಯಂತ್ರಗಳು ಇರಬೇಕು. ಉದಾಹರಣೆಗೆ: ಹೆಚ್ಚು ಕೆಲಸ ಕೊಡುವಂಥ ರಾಟೆ, ಹಗ್ಗ ಹೊಸೆಯುವ ಚಕ್ರ ಮುಂತಾದುವು.

(ಈ) ಮೊದಲಿನ ತರದ ಯಂತ್ರಗಳನ್ನು ಸಿದ್ಧಗೊಳಿಸುವ ಯಂತ್ರ ಗಳನ್ನೂ ಅವುಗಳ ಉಪಕರಣಗಳನ್ನೂ, ವಿಶೇಷವಾಗಿ ಒಂದೇ ಅಳತೆಯ ಮಾಪುಗಳನ್ನೂ ಒಂದೇ ಪದ್ಧತಿಯ ಯಂತ್ರಗಳನ್ನೂ ಭಾಗಗಳನ್ನೂ ಮಾಡು ವುದು ಅವಶ್ಯವಿರಬೇಕು.

(ಉ) ಸರಿಯಾಗಿ ಕೆಲಸ ಕೊಡುವ ಸೂಕ್ಷ್ಮ ಪದಾರ್ಥಗಳನ್ನು ಮಾಡು ವುದು ಅವಶ್ಯವಿರುವಾಗ. ಉದಾಹರಣೆಗೆ: ಗಡಿಯಾರ, ಟೈಪು-ರೈಟರು, ಪ್ರಯೋಗಶಾಲೆಯ ಸಾಧನಗಳು ಇತ್ಯಾದಿ.

(ಊ) ಯಾವಾಗಲೂ ಬಹಳ ಜನರನ್ನು ಕೆಲಸಕ್ಕೆ ತೊಡಗಿಸಲು ಬರ ದಂಥ ಉದ್ಯೋಗಗಳಿದ್ದಲ್ಲಿ, ಇಂಥ ಉದ್ಯೋಗಗಳಿಂದ ತಯಾರಾದ ವಸ್ತು ಗಳು ಸಾರ್ವಜನಿಕರಿಗೆ ವಿಶೇಷವಾಗಿ ಅವಶ್ಯವಿದ್ದಲ್ಲಿ. ಉದಾಹರಣೆಗೆ: ನಲ್ಲಿ ಗಳು, ನಲ್ಲಿಗಳ ಬಾಯಿಗಳು.

(ಎ) ಸ್ವಂತ ಸಾಹಸದಿಂದ ಮಾಡಲಾಗದಂಥ, ಆದರೆ ಸರಕಾರದಿಂದ ಅಥವಾ ಸರಕಾರದ ಹಿಡಿತದಿಂದ ನಡೆಯುವಂಥ ಉದ್ಯೋಗಗಳಿದ್ದಲ್ಲಿ. ಉದಾ ಹರಣೆಗೆ: ಉಗೆ-ಬಂಡಿ, ಉಗೆ-ಹಡಗು, ಮಹತ್ವದ ಕಣಿಗಳು, ಸೀಮೆ ಎಣ್ಣೆಯ ಬಾವಿಗಳು ಮುಂತಾದುವು. ಇಂಥ ಕಡೆಗಳಲ್ಲಿ ಎರಡನೇ ತರದ ಯಂತ್ರ ಗಳನ್ನು ಬಳಸಬಹುದು.

೫ ಎರಡನೇ ತರದ ಯಂತ್ರಗಳ ಸಹಾಯದಿಂದ ನಡೆಯುವ ಉದ್ಯೋಗ ಗಳು ಎಷ್ಟು ಅವಶ್ಯಕವೋ, ಅವುಗಳಿಗೆ ಬೇಕಾಗುವ ಕಾರ್ಖಾನೆಗಳೂ ಅಷ್ಟೇ ಅವಶ್ಯಕ. ಉದಾಹರಣೆಗೆ: ಕಬ್ಬಿಣ, ಉಪಕರಣಗಳು, ಯಂತ್ರಗಳು, ಗಾಜು, ವಿದ್ಯುತ್ ಮೊದಲಾದುವುಗಳ ಮತ್ತು ಅವುಗಳಿಗೆ ಬೇಕಾಗುವ ಸಾಧನಗಳನ್ನು ತಯಾರಿಸುವ ಕಾರ್ಖಾನೆಗಳು.

## ೧೨ ಅಂತರ್-ರಾಷ್ಟ್ರೀಯ ವ್ಯಾಪಾರ

೧ ಯಾವ ವಸ್ತುಗಳು ತಮ್ಮ ದೇಶದಲ್ಲಿ ಹುಟ್ಟುವುದಿಲ್ಲವೊ, ಅವುಗಳನ್ನು

ತಯಾರಿಸಲು ನೈಸರ್ಗಿಕ ಅನುಕೂಲತೆಗಳು ಇರುವುದಿಲ್ಲವೊ, ಅಥವಾ ಅತ್ಯಂತ ಕಷ್ಟದಿಂದ ಇಲ್ಲವೆ ಪರರನ್ನು ಪೀಡಿಸಿಯೆ ಹುಟ್ಟಿಸುವುದು ಸಾಧ್ಯವೊ, ತಮ್ಮ ಜೀವವನ್ನೊಡ್ಡಿ ಯಾವುದರ ತಯಾರಿಕೆಯ ಕಲೆಯನ್ನು ಪರದೇಶಗಳು ಹಸ್ತ ಗತ ಮಾಡಿಕೊಂಡಿರುವವೊ, ಯಾವುದರಿಂದ ಅವರ ಉಪಜೀವನವು ನಡೆಯು ತ್ತಿರುವುದೊ, ಯಾವುದು ಜೀವನದಲ್ಲಿ ಅಷ್ಟು ಮಹತ್ವದ ಕಾರ್ಯಗಳಿಗೆ ಅವಶ್ಯ ವಿಲ್ಲವೊ, ಅಥವಾ ಯಾವುದರ ಹೊರತು ಕೋಟ್ಯಂತರ ಜನರ ಜೀವನವು ಸಾಗ ಬಹುದೊ, ಯಾವುದರ ಉಪಯೋಗ ನಿತ್ಯ-ಜೀವನದಲ್ಲಿ ಆಗುವುದಿಲ್ಲವೊ, ಯಾವುದರ ಹೊರತು ಸಾಮಾನ್ಯ ಜನರ ಜೀವನವು ಸುಸೂತ್ರವಾಗಿ ಸಾಗು ವುದೊ, ಅಂಥ ವಸ್ತುವಿನ ಅಂತರ್-ರಾಷ್ಟ್ರೀಯ ವ್ಯಾಪಾರವನ್ನು ಮಾಡ ಬಹುದು.

೨ ಈ ವ್ಯಾಪಾರದಲ್ಲಿ ಯಾವ ತರದ ಬಲಾತ್ಕಾರವೂ ಹಿಂಸೆಯೂ ಕೂಡದು. ಅಲ್ಲದೆ, ರಾಜಾಧಿಕಾರವನ್ನು ಎಂದೂ ಉಪಯೋಗಿಸಕೂಡದು.

೩ ಮೇಲೆ ಹೇಳಿದ ವಸ್ತುಗಳನ್ನು ಯಾವುದೇ ರೀತಿಯಿಂದ ತಮ್ಮ ದೇಶ ದಲ್ಲಿ ಮಾಡಿಕೊಳ್ಳಲು ಆಗ್ರಹತೊಟ್ಟರೆ ಅದು ಅಧರ್ಮವೇ ಸರಿ.

೪ ಪ್ರಯೋಗ-ಶಾಲೆಗಳಲ್ಲಿ ಉಪಯೋಗಿಸಲ್ಪಡುವಂಥ ಎಕ್ಸ್‌ರೇ ಯಂತ್ರ, ವಿಶಿಷ್ಟ ತರದ ಗಡಿಯಾರ, ಕಾಶ್ಮೀರಿನ ಉಣ್ಣೆಯ ಬಟ್ಟೆ, ಕೇಸರಿ, ಏಲಕ್ಕಿ, ದಾಲಚಿನ್ನಿ ಮುಂತಾದ ವಿಶಿಷ್ಟ ಪ್ರಕಾರದ ವಸ್ತು-ವನಸ್ಪತಿಗಳು ಅಂತರ್ ರಾಷ್ಟ್ರೀಯ ವ್ಯಾಪಾರಕ್ಕೆ ಯೋಗ್ಯವಾದುವು ಎನ್ನಬಹುದು.

## ಸಪ್ತಮ ಖಂಡ

# ಉದ್ಯೋಗ

—•—

### ೧ ಒಕ್ಕಲುತನ

೧ ಹಿಂದೂಸ್ತಾನಕ್ಕೆ ಒಕ್ಕಲುತನವು ತನ್ನ ಪ್ರಾಣದಷ್ಟೇ ಪ್ರಿಯವಾದ ಉದ್ಯೋಗ. ಹಿಂದೂಸ್ತಾನದ ಶೋಷಣೆ ಮಿತಿಮೀರಿ ನಡೆದಿದ್ದರೂ ಈ ದೇಶ ಈ ವರೆಗೂ ಜೀವಿಸಿದೆ. ಆಹಾರದ ವಿಷಯದಲ್ಲಿ ಪರಾವಲಂಬಿಯಾಗದಿದ್ದುದೇ

ಇದಕ್ಕೆ ಕಾರಣ. ಹಿಂದೂಸ್ತಾನದ ಈ ಸ್ವಾವಲಂಬನ-ವೃತ್ತಿಗೂ ಈಗ ಕುತ್ತು ಬರುವ ಸಂದರ್ಭವಿದೆ.

೨ ಹಿಂದುಸ್ತಾನದ ಈಗಿನ ಆರ್ಥಿಕ ಹಾಗೂ ರಾಜಕೀಯ ನೀತಿ ಒಕ್ಕಲುತನವನ್ನು ನಾಶಮಾಡುತ್ತಲಿದೆ. ಆದ್ದರಿಂದ ಇಂದು ಒಕ್ಕಲುತನವು ಒಂದು ಗಳಿಕೆಯ ಉದ್ಯೋಗವಾಗಿ ಉಳಿದಿರುವುದಿಲ್ಲ.

೩ ಬ್ರಿಟಿಷ್ ರಾಜ್ಯ-ತಂತ್ರದಲ್ಲಿ ಭೂಮಿಯ ಮೇಲಿನ ಕರದ ಭಾರವು ಮೊಟ್ಟ ಮೊದಲನೆಯ ಭಾರವೆಂದು ಕ್ಯಾದೆಯಿಂದ ಪ್ರಸ್ಥಾಪಿಸಿದ್ದಾರೆ. ಆದರೆ ಸ್ವರಾಜ್ಯದಲ್ಲಿ ಈ ಸಂಗತಿ ತದ್ವಿರುದ್ಧವಿರತಕ್ಕದ್ದು. ಒಕ್ಕಲಿಗರ ಭಾರವೆಲ್ಲ ರಾಜ್ಯದ ಮೇಲಿರಬೇಕು, ತೆರಿಗೆ ಮುಂತಾದ ಕರಗಳು ಒಕ್ಕಲುತನಕ್ಕೆ ಹಾನಿ ತಟ್ಟದಂತೆ ಹೇರಲ್ಪಡಬೇಕು, ವಸೂಲು ಮಾಡಲ್ಪಡಬೇಕು.

೪ ದೇಶಕ್ಕೆ ಸಾಕಷ್ಟು ಧಾನ್ಯವನ್ನು ಸಂಗ್ರಹಿಸಿ ಇಡಲು ಬರುವಂತೆ ಸ್ವರಾಜ್ಯದ ಆರ್ಥಿಕ ನೀತಿಯನ್ನು ರಚಿಸಬೇಕು.

೫ ಹಿಂದೂಸ್ತಾನದಲ್ಲಿ ಈ ವರೆಗೂ ಹಣ್ಣು ಹಂಪಲಿನ ಗಿಡಗಳ ಬೆಳೆವಣಿಗೆಗೆ ಸಾಕಷ್ಟು ಲಕ್ಷ್ಯ ಕೊಟ್ಟಿಲ್ಲ. ಇತ್ತ ಕಡೆ ವಿಶೇಷ ಗಮನಕೊಡತಕ್ಕದ್ದು.

೬ ಒಕ್ಕಲಿಗರು ಹೆಚ್ಚಾಗಿದ್ದಲ್ಲಿ ದನಗಳನ್ನು ಮೇಯಿಸುವುದಕ್ಕೆ ಭೂಮಿಯ ಅವಶ್ಯಕತೆಯುಂಟು. ಒಕ್ಕಲು ಹಾಗೂ ಕಾಡಿನ ಖಾತೆಯ ನೀತಿ ದನಗಳ ಸಾಕುವಿಕೆಗೆ ಅನುಕೂಲವಾಗುವಂತಿರಬೇಕು. ಕೆಲವು ಹೊಲಗಳನ್ನು ದನಗಳ ಆಹಾರಕ್ಕೆಂದೇ ಬೆಳೆಯತಕ್ಕದ್ದು.

೭ ಒಕ್ಕಲುತನ ಹಾಗೂ ಇತರ ಉದ್ಯೋಗಗಳ ವಿಷಯದಲ್ಲಿ ಸದ್ಯದಲ್ಲಿ ಪ್ರಚಲಿತವಿರುವ ಧನೋತ್ಪಾದಕ ದೃಷ್ಟಿ ಇರಕೂಡದು. ಸುಂಕ, ಕಂದಾಯ, ಸಾಲ, ಮುಂತಾದುವನ್ನು ಕೊಡತಕ್ಕ ಚಿಂತೆ ಇಲ್ಲದಿದ್ದರೆ ಉದ್ಯೋಗಗಳಿಂದ ತಯಾರಿಸಿದ ಪದಾರ್ಥಗಳನ್ನು ಆದಷ್ಟು ಹೆಚ್ಚಿಗೆ ಮಾರಿ, ಹೆಚ್ಚು ಬೆಲೆಯನ್ನು ಪಡೆಯುವ ಗೋಜಿಗೆ ಜನರು ಹೋಗುವುದಿಲ್ಲ. ತಮ್ಮ ತಮ್ಮ ಕುಟುಂಬಕ್ಕೆ, ಸಮಾಜಕ್ಕೆ, ಇಲ್ಲವೆ ಹಳ್ಳಿಗೆ ಯಾವ ಪದಾರ್ಥಗಳು ಎಷ್ಟೆಷ್ಟು ಬೇಕಾಗುವವೆಂಬ ದೃಷ್ಟಿಯಿಂದಲೇ ಉದ್ಯೋಗ ಮಾಡುವರು.

೮ ಹೀಗೆ ಒಕ್ಕಲಿಗನು ಮೊದಲು ಹುಲ್ಲು, ಹೊಟ್ಟು, ಧಾನ್ಯ ಮುಂತಾದ್ದನ್ನು ತನ್ನಲ್ಲಿ ಸಂಗ್ರಹಿಸಿಕೊಳ್ಳುವ ವಿಚಾರವನ್ನೇ ಮಾಡುವನು. ಹೆಚ್ಚು ಲಾಭ, ಧಾರಣೆ ಮುಂತಾದುವುಗಳ ಕಡೆಗೆ ಗಮನವಿತ್ತು ಹತ್ತಿ, ಎಣ್ಣೆ-ಕಾಳು,

ಹೊಗೆ-ಸೊಪ್ಪು ಮುಂತಾದ ವಸ್ತುಗಳನ್ನು ಬೆಳೆಸಲು ಬಯಸುವುದಿಲ್ಲ; ಅದರ ಗೋಜಿಗೂ ಹೋಗುವುದಿಲ್ಲ.

೯ ಒಕ್ಕಲುತನವನ್ನು ಹೆಚ್ಚು ಹಣ ಗಳಿಸಬೇಕೆಂಬ ವ್ಯಾಪಾರದ ದೃಷ್ಟಿಯಿಂದ ಮಾಡಿದರೆ ಕೊನೆಯಲ್ಲಿ ಅವನಿಗೆ ಲಾಭವಾಗುವುದೇ ಇಲ್ಲ. ಒಂದು ಕಡೆಯಿಂದ ಬಂದ ಹಣ ಇನ್ನೊಂದು ಕಡೆಗೆ ಹೊರಟುಹೋಗುವುದು. ಇದರಿಂದ ನೈತಿಕ-ಬಲಕ್ಕೆ ಹಾನಿಯೂ ತಟ್ಟುವುದು. ಸ್ವತಃ ತಾವು ಮಾಡುತ್ತಿರುವ ಒಕ್ಕಲುತನದಿಂದ ತಮ್ಮ ಮತ್ತು ಅನ್ಯರ ಶಾರೀರಿಕ, ಮಾನಸಿಕ, ನೈತಿಕ ಹಾನಿ ಎಷ್ಟಾಗುತ್ತಿರುವುದೆಂಬ ಯೋಚನೆ ಮಾಡುವ ಕರ್ತವ್ಯಬುದ್ಧಿಯೆ ಅವರಲ್ಲಿ ಉಂಟಾಗುವುದಿಲ್ಲ. ಅದು ನಾಶವಾಗಿ ಹೋಗುತ್ತದೆ. ಅವರು ಹೊಗೆಸೊಪ್ಪು, ಅಫೀಮು ಮುಂತಾದುವನ್ನು ಬೆಳೆಯಿಸುವುದೇ ಇದಕ್ಕೆ ಸಾಕ್ಷಿ.

## ೨ ಪೋಷಕ ಇಲ್ಲವೆ ಪೂರಕ ಉದ್ಯೋಗಗಳು

೧ ಹಿಂದುಸ್ತಾನದಲ್ಲಿ ಒಕ್ಕಲುತನಕ್ಕೆ ಎಷ್ಟೋ ನೈಸರ್ಗಿಕ ಸಂಕಟಗಳಿವೆ. ಅವುಗಳನ್ನು ದೂರಮಾಡಲು ಎಷ್ಟು ಹಂಚಿಕೆ ಹಾಕಿದರೂ ಅವು ಸ್ವಲ್ಪ ಹೆಚ್ಚು-ಕಡಮೆ ಪ್ರಮಾಣದಲ್ಲಿ ಇರತಕ್ಕವೇ. ಒಕ್ಕಲುತನ ಹನ್ನೆರಡೂ ತಿಂಗಳು ಮಾಡುವಂಥ ಉದ್ಯೋಗವಾಗಲಾರದು. ಒಕ್ಕುವ ದಿನಗಳಲ್ಲಿ ಕೂಡ ಒಕ್ಕಲಿಗರು ಸತತವಾಗಿ ದುಡಿಯಬೇಕಾಗುವುದಿಲ್ಲ. ಆದರೆ ಒಮ್ಮೊಮ್ಮೆ ಬಿಡಿ-ದಿನಗಳಲ್ಲಿಯೂ ಹೆಚ್ಚು ಕೆಲಸಗಾರರು ಬೇಕಾಗುವರು. ನಡುವಿನ ಈ ಬಿಡುವಿನ ಕಾಲದಲ್ಲಿ ಭೂಮಿಯ ಒಡೆಯರೂ ಅವರ ಮನೆಯವರೂ ನಿರುದ್ಯೋಗಿಗಳಾಗುವರು. ಆದಕ್ಕೋಸ್ಕರ ಒಕ್ಕಲುತನದ ಜೊತೆಗೆ ಯಾವುದಾದರೊಂದು ಪೂರಕ ಉದ್ಯೋಗವು ಬೇಕೇಬೇಕು. ಆದ್ದರಿಂದ ಒಕ್ಕಲುತನವನ್ನೂ ಉದ್ಯೋಗವನ್ನೂ ಒಂದನ್ನು ಇನ್ನೊಂದರಿಂದ ಬೇರ್ಪಡಿಸಲಿಕ್ಕಾಗುವುದಿಲ್ಲ.

೨ ಪೂರಕ – ಪೋಷಕ – ಉದ್ಯೋಗಗಳಿಗೆ ಕೆಳಗಿನ ಅನುಕೂಲತೆಗಳಿರಬೇಕು:

(ಅ) ಅವು ಮುಖ್ಯವಾದ ಉದ್ಯೋಗಕ್ಕೆ–ಒಕ್ಕಲುತನಕ್ಕೆ–ಅನುಕೂಲವಾಗಿರಬೇಕು. ಅವಕ್ಕಾಗಿ ಒಕ್ಕಲುತನವನ್ನು ಮೂಲೆಗೆ ತಳ್ಳುವ ಸಂದರ್ಭ ಬರಕೂಡದು.

(ಆ) ಮುಖ್ಯ ಉದ್ಯೋಗಕ್ಕಾಗಿ ದುಡಿಯುವ ಸಂದರ್ಭದಲ್ಲಿ ಕೂಡ

ಅವುಗಳನ್ನು ಹಾನಿಯಾಗದಂತೆ ಊರ್ಜಿತ ಸ್ಥಿತಿಯಲ್ಲಿಟ್ಟುಕೊಳ್ಳಲು ಬರುವಂಥ ವಿರಬೇಕು; ಹೆಚ್ಚು ಗಮನವನ್ನು ಅಪೇಕ್ಷಿಸದೆ ಸರಿಯಾಗಿ ನಡೆದುಕೊಂಡು ಹೋಗುವಂಥವಿರಬೇಕು.

(ಇ) ಮೇಲಾಗಿ ಇವು ನಿತ್ಯ ನೌಕರಿಯ ಉದ್ಯೋಗಗಳಾಗಿರದೆ ಸ್ವತಂತ್ರ ಕೂಲಿಯ ಕೆಲಸಗಳಾಗಿರಬೇಕು.

(ಈ) ಮೇಲೆ ವಿವರಿಸಿದ ಕಾರಣಗಳಿಗೆ ಹೊಂದಿಕೊಂಡಿರುವ ಉದ್ಯೋಗ ಗಳಿಗೆ ಆಗತ್ಯವಿದ್ದ ಯಂತ್ರಗಳಿಗೋಸ್ಕರ, ಉಳಿದ ಸಾಮಗ್ರಿಗಳಿಗೋಸ್ಕರ, ನಿರ್ಧನರಾದ ಪ್ರಜೆಗಳು ಶಕ್ತಿ ಮೀರಿ ಭಂಡವಲು ಹಾಕುವ ಸಂದರ್ಭ ಬರ ಕೂಡದು.

(ಉ) ಆ ಉದ್ಯೋಗಗಳು ಹೊಲಗಳ ಬಳಿಯಲ್ಲಿ, ಅಥವಾ ಮನೆಯಲ್ಲಿ, ಇಲ್ಲವೆ ಹಳ್ಳಿಯಲ್ಲೇ ಕುಳಿತು ಮಾಡಲು ಸಾಧ್ಯವಿರಬೇಕು.

(ಊ) ಈ ಉದ್ಯೋಗಗಳನ್ನು ಬಹಳ ಜನರು ಮಾಡಿದರೂ ಅವುಗಳಿಂದ ಉತ್ಪನ್ನವಾದ ವಸ್ತುಗಳು ಹೆಚ್ಚು ವೆಚ್ಚವಾಗುತ್ತಿರಬೇಕು. ಎಂದರೆ ಅವು ಸರ್ವ-ಪ್ರಿಯ, ಸರ್ವರಿಗೂ ಬೇಕಾಗುವಂಥವು ಇರಬೇಕು.

(ಎ) ಆ ಉದ್ಯೋಗಗಳಲ್ಲಿ ಬಹಳ ಜನರನ್ನು ತೊಡಗಿಸುವ ಸಂದರ್ಭ ಬಂದರೆ, ಅಷ್ಟು ಭರದಿಂದಲೂ ಸರಳವಾಗಿಯೂ ಕಡಮೆ ವೆಚ್ಚದಿಂದ ಯಂತ್ರಾದಿ ಗಳನ್ನು ಉಪಯೋಗಿಸಲು ಬರುವಂತೆಯೂ ಅವು ಇರಬೇಕು.

(ಏ) ಸಾವಿರಾರು ಜನರ ದೃಷ್ಟಿಯಿಂದಲೂ ಆ ಉದ್ಯೋಗಗಳು ಅಶಿಕ್ಷಿತ, ಮಂದ ಬುದ್ಧಿಯ, ನಿರ್ಬಲ, ಚಿಕ್ಕ-ದೊಡ್ಡ ಸರ್ವಪ್ರಕಾರದ ಜನರಿಗೂ ಮಾಡಲು ಬರುವಂತೆ ಇರಬೇಕು.

(ಐ) ಇದಲ್ಲದೆ, ಅವು ಕೆಲಸದಲ್ಲಿದ್ದ ಮನುಷ್ಯನನ್ನು ಜಡ ಯಂತ್ರಗಳಂತೆ ಆನಂದರಹಿತ, ರಸಹೀನ ಮಾಡುವಂಥವಿರಕೂಡದು. ಕೆಲಸ ಮುಗಿದ ಬಳಿಕ ಬೇಸರ ಹುಟ್ಟಿಸುವಂಥವೂ ದಣಿಸುವಂಥವೂ ಇರಕೂಡದು.

೩. ಈ ಪೋಷಕ ಉದ್ಯೋಗಗಳಲ್ಲಿ, ನೂಲುವ ರಾಟಿಗೂ ಗೋಪಾಲನೆಗೂ ಪ್ರಮುಖ ಸ್ಥಾನವಿರತಕ್ಕದ್ದು. ಪ್ರಾಚೀನ ಕಾಲದಿಂದಲೂ ಇವೆರಡೂ ಉದ್ಯೋಗಗಳು ಒಕ್ಕಲುತನದೊಡನೆ ದೀರ್ಘಕಾಲದ ಒರೆಗಲ್ಲಿಗೆ ಹತ್ತಿ ಬದುಕಿ ಬಂದಿರುವವು.

೪ ತಂತಿ, ಅಂಚೆ, ಉಗೆ-ಬಂಡಿ ಮೊದಲಾದುವು ಅಖಿಲ ಭಾರತೀಯ

ಖಾತೆಗಳು. ಇವುಗಳ ಹಾಗೆ ರಾಟೆಯೂ ಗೋಪಾಲನೆಯೂ ಅಖಿಲ ಭಾರತದ ದೃಷ್ಟಿಯಿಂದ ಅತ್ಯಂತ ಮಹತ್ವದವು. ದೊಡ್ಡ ಪ್ರಮಾಣದಲ್ಲಿ, ಶಕ್ಯವಿದ್ದಷ್ಟು ಬಹಳ ಜನರು, ಸರಳವಾಗಿಯೂ ಅನುಕೂಲತೆಗಳಿಗೆ ಅನುಸಾರವಾಗಿಯೂ ಮಾಡಲು ಬರುವಂಥ ಉದ್ಯೋಗಗಳಿವು.

೫ ಮುಂದಿನ ಪ್ರಕರಣಗಳಲ್ಲಿ ಈ ಎರಡೂ ಉದ್ಯೋಗಗಳನ್ನು ಕುರಿತು ಹೆಚ್ಚು ವಿಸ್ತಾರವಾದ ವಿಚಾರವು ಬರುವುದು ಗೋಪಾಲನೆಯ ಉದ್ಯೋಗಕ್ಕೆ ಭೂಮಿಯೂ ಭಂಡವಲೂ ಸ್ವಲ್ಪ ಹೆಚ್ಚು ಬೇಕು. ಆದ್ದರಿಂದ ಇದು ಸ್ವಂತ ಭೂಮಿಯಿದ್ದ ಒಕ್ಕಲಿಗರ ಪೋಷಕ ಉದ್ಯೋಗವಾಗಬಹುದು. ಆದರೆ ಕೂಲಿಯಿಂದ ಉಪಜೀವಿಸುವ ಸಾವಿರಾರು ಜನಗಳ ಉದ್ಯೋಗವಾಗಲಾರದು. ಅಲ್ಲದೆ ಇದು ಸ್ವತಂತ್ರ ಉದ್ಯೋಗವೂ ಆಗಬಹುದು. ನೂಲುವ ಉದ್ಯೋಗ ಮಾತ್ರ ಗೋಪಾಲನೆ, ಒಕ್ಕಲುತನ ಇವೆರಡರ ಜೊತೆಗೂ ನಡೆಯಬಲ್ಲುದು. ಈ ದೃಷ್ಟಿಯಿಂದ ಗೋಪಾಲನೆಗಿಂತ ರಾಟೆಗೆ ಹೆಚ್ಚು ಮಹತ್ವವಿದೆ. ಆದರೂ ಗೋಪಾಲನೆಯೂ ನೂಲುವುದೂ ಒಕ್ಕಲಿಗರಿಗೆ ಪೂರಕ ಉದ್ಯೋಗಗಳಾಗಬಲ್ಲುವು.

೬ ರಾಟೆಗೆ ಹೆಚ್ಚು ಮಹತ್ವವಿದೆ, ಅಥವಾ ಹೆಚ್ಚು ಮಹತ್ವವಿರತಕ್ಕದ್ದು ಎಂಬ ಮಾತಿನಲ್ಲಿ, ರಾಟೆಯ ಹೊರತು ಇನ್ನಾವ ಉದ್ಯೋಗಗಳೂ ಕೂಡದೆಂಬ ಭಾವವಿಲ್ಲ. ಸ್ಥಾನಿಕ ಪರಿಸ್ಥಿತಿ ಅನುಕೂಲವಿದ್ದು, ನೂಲುವ ಉದ್ಯೋಗಕ್ಕಿಂತಲೂ ಹೆಚ್ಚು ಲಾಭಕಾರಿಯಾದ ಇನ್ನೊಂದು ಪೂರಕ ಉದ್ಯೋಗವು ಸಾಧ್ಯವಿದ್ದರೆ, ನೂಲುವ ಬದಲು ಅಥವಾ ನೂಲುವುದರ ಸಂಗಡ ಅದನ್ನೂ ಮಾಡಬಹುದು. ಸ್ಥಾನಿಕ ರಾಜ್ಯತಂತ್ರವೂ, ಪ್ರಜಾತಂತ್ರವೂ ಈ ಉದ್ಯೋಗಗಳ ಕಡೆಗೆ ಹೆಚ್ಚು ಗಮನ ಕೊಟ್ಟು ಅವನ್ನು ಬೆಳೆಸಲು ಯತ್ನಿಸಬೇಕು. ಇದು ಅವುಗಳ ಕರ್ತವ್ಯಕರ್ಮ.

೭ ಯಾವ ಹಳ್ಳಿಯಲ್ಲಿ ಯಾವ ಮೂಲವಸ್ತು ಹುಟ್ಟುವುದೋ, ಅದನು ಸಂಗ್ರಹಿಸಲಿಕ್ಕೂ, ಮಾರಲಿಕ್ಕೂ, ಮನುಷ್ಯನ ಉಪಯೋಗಕ್ಕೆ ಯೋಗ್ಯವನ್ನಾಗಿ ಮಾಡುವುದಕ್ಕೂ ಆಗಬೇಕಾದ ಕ್ರಿಯೆಗಳೆಲ್ಲವೂ ಅದೇ ಹಳ್ಳಿಯಲ್ಲಿ ಆಗಬೇಕು. ಎಂದರೆ ಮೂಲವಸ್ತುವನ್ನು ತಯಾರಿಸುವವನು ಅಲ್ಲೇ ಇರತಕ್ಕದ್ದು. ಉದಾಹರಣೆಗೆ: ಪರದೇಶಗಳಿಗೂ ಪಟ್ಟಣಗಳಿಗೂ ಬತ್ತವು ಹೋಗುವುದಿಲ್ಲ, ಆದರೆ ತಿನ್ನಲು ಯೋಗ್ಯವಾದ ಅಕ್ಕಿಯು ಹೋಗುತ್ತದೆ. ಗೋದಿಯ ಬದಲು

ಹಿಟ್ಟು ದೊಡ್ಡ ಪ್ರಮಾಣದಲ್ಲಿ ಹೋಗುತ್ತದೆ. ಆ ಹಿಟ್ಟಿನಿಂದ ತಯಾರಿಸಿದ ರೊಟ್ಟಿ, ಬಿಸ್ಕೀಟು ಮುಂತಾದುವುಗಳ ಮಾರಾಟವೂ ಚನ್ನಾಗಿ ಆಗುವುದಲ್ಲದೆ, ಜನರೂ ಅವುಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಕಬ್ಬಿನಿಂದ ಬೆಲ್ಲ ವನ್ನೂ ಸಕ್ಕರೆಯನ್ನೂ ಮಾಡಿದ ಮೇಲೆಯೇ ತಿನ್ನಲು ಬರುವುದು. ಎಣ್ಣೆ-ಕಾಳುಗಳ ಉಪಯೋಗವು ಹೆಚ್ಚಾಗಿ ಆಗುವುದು ಎಣ್ಣೆ ತೆಗೆದ ಮೇಲೆಯೇ. ಹತ್ತಿಯ ಉಪಯೋಗವಾಗುವುದು ಬಟ್ಟೆಯಾದ ಮೇಲೆ. ಚರ್ಮದ ಉಪ ಯೋಗವು ಚರ್ಮದಿಂದ ತಯಾರಿಸಿದ ವಸ್ತುಗಳ ಮುಖಾಂತರವೇ ಆಗು ವುದು. ಆದುದರಿಂದ ಬತ್ತ ಕುಟ್ಟುವ, ಹಿಟ್ಟು ಬೀಸುವ, ಬಿಸ್ಕೀಟು ರೊಟ್ಟಿ ಮಾಡುವ, ಎಣ್ಣೆ ತೆಗೆಯುವ, ನೇಯುವ. ಚರ್ಮ ಹೊಲೆಯುವ ಕೆಲಸಗಳು ಕೂಡ ಗ್ರಾಮದಲ್ಲೇ ಆಗತಕ್ಕದ್ದು. ಇವು ಒಕ್ಕಲಿಗರ, ಹಳ್ಳಿಗರ ಪೂರಕ ಉದ್ಯೋಗಗಳಾಗಬಹುದು.

೮ ಇವೆಲ್ಲ ಪೂರಕ ಉದ್ಯೋಗಗಳಾಗಿ ನಡೆದರೆ ಹಳ್ಳಿಗರಿಗೆ ಎಷ್ಟೋ ಲಾಭವಾಗುವುದು. ಉದಾಹರಣೆಗೆ: ಬತ್ತದ ಗೊಳಲಿ, ತೌಡು, ಗೋದಿಯ ಹೊಟ್ಟು, ಕಬ್ಬಿನ ಸಿಪ್ಪೆ, ಎಣ್ಣೆ-ಕಾಳಿನ ಹಿಂಡಿ, ಹತ್ತಿ-ಕಾಳು, ನೂಲಿನ ಗುಂಜು ಮುಂತಾದ ವಸ್ತುಗಳು ದನಗಳಿಗಾಗಿ ಉಪಯೋಗವಾಗುವವು, ಅಥವಾ ಗೊಬ್ಬರವಾಗುವವು. ಇವುಗಳಿಂದ ಬೇರೆ ಉದ್ಯೋಗಗಳೂ ಹುಟ್ಟಬಹುದು.

## ೩ ಸಂಪೂರ್ಣ ಸ್ವದೇಶಿ

೧ ಸ್ವದೇಶೀ ವಸ್ತುಗಳಿಗೆ ಉತ್ತೇಜನ ಕೊಡತಕ್ಕದ್ದು. ಈ ವಿಷಯದ ಸಮಾವೇಶ ಸ್ವದೇಶೀ ಧರ್ಮದ ಪಾಲನೆಯಲ್ಲೇ ಆಗಿಬಿಡುತ್ತದೆ. ಸ್ವದೇಶೀ ವಸ್ತುಗಳಿಗೆ ಪ್ರೋತ್ಸಾಹ ಕೊಡತಕ್ಕದ್ದೆಂಬ ಚಳುವಳಿಯಲ್ಲಿ ವಿವೇಕದ ಆವಶ್ಯ-ಕತೆ ಇದೆ.

೨ ವಿವೇಕದಿಂದ ಯೋಚಿಸದಿದ್ದರೆ ಸ್ವದೇಶಿಯ ಹೆಸರಿನಿಂದ ತಿಳಿದಾಗಲಿ ತಿಳಿಯದೆ ಆಗಲಿ ಆಡಂಬರ ಹೆಚ್ಚಾಗುವುದು, ಅನೇಕ ಕಾರ್ಯಕರ್ತರ ಶಕ್ತಿ ವ್ಯರ್ಥವಾಗುವುದು, ಆತ್ಮಹಾನಿಯೂ ಆಗುವುದು.

೩ ಯಾವ ವಸ್ತುಗಳ ಪ್ರಚಾರಕ್ಕೋಸ್ಕರ ಹೆಚ್ಚು ಸಹಾಯ ಆವಶ್ಯ ವಿರುವುದಿಲ್ಲವೊ, ಜಾಹೀರಾತಿನ ಆವಶ್ಯಕತೆ ಇಲ್ಲವೊ, ಅಂಥ ವಸ್ತುಗಳ ಪ್ರದರ್ಶನ ವನ್ನು ಕಾರ್ಯಕರ್ತರು ಜರುಗಿಸುವ ಅಗತ್ಯವಿಲ್ಲ. ಏಕೆಂದರೆ, ಹಾಗೆ ಮಾಡಿದರೆ

ಅವುಗಳ ಬೆಲೆ ಹೆಚ್ಚಾಗಿ, ಒಬ್ಬರು ಇನ್ನೊಬ್ಬರೊಡನೆ ಮೇಲಾಟ ಹೂಡಿ ವೈರವನ್ನು ಕಟ್ಟಿಕೊಳ್ಳುವ, ಅನಿಷ್ಟವಾದ ಜಗಳವು ಬೆಳೆಯುವ ಸಂಭವವುಂಟು.

೪ ಉದಾಹರಣೆಗಾಗಿ: ಬಟ್ಟೆಯ ಗಿರಣಿ ಸಕ್ಕರೆಯ ಗಿರಣಿ ಅಕ್ಕಿಯ ಗಿರಣಿಗಳಿಗೆ ಸಹಾಯ ಮಾಡುವುದು ಅವಶ್ಯವಲ್ಲ. ಇದೇ ರೀತಿ ಕಾಗದದ ದೇಶೀ ಗಿರಣಿ, ಎಣ್ಣೆಯ ಗಿರಣಿ, ಪರದೇಶೀ ಔಷಧಗಳನ್ನು ತಯಾರಿಸುವ ದೇಶೀ ಕಾರ್ಖಾನೆ, ಸಾಬೋನು ದಂತ-ಮಂಜನ ಬ್ರಶ್ ಮುಂತಾದ ಪದಾರ್ಥಗಳ ಕಾರ್ಖಾನೆ, ಚರ್ಮದ ದೊಡ್ಡ ಕಾರ್ಖಾನೆ ಮುಂತಾದುವೂ ಸಹಾಯಕ್ಕೆ ಪಾತ್ರವೆಂದು ಹೇಳಲಾಗದು.

೫ ಪರದೇಶದ ಕಾಗದ, ಸಕ್ಕರೆ, ಅಕ್ಕಿ, ಬಟ್ಟೆ, ಎಣ್ಣೆ, ಔಷಧ, ಸಾಬೋನು, ದಂತ-ಮಂಜನ, ಬ್ರಶ್ ಮುಂತಾದ ಪದಾರ್ಥಗಳನ್ನು ಬಳಸಕೂಡದೆಂಬ ಕಟ್ಟಪ್ಪಣೆ ಇಲ್ಲವೆಂದು ಇದರ ಅರ್ಥವಲ್ಲ. ಯಾವುದಕ್ಕೆ ಪರದೇಶದ ದಾಳಿಯನ್ನು ತಡೆಯುವಷ್ಟು ಶಕ್ತಿಯು ಇಲ್ಲವೊ ಅದಕ್ಕೆ ಪೂರ್ಣ ಸಹಾಯವನ್ನೀಯಬೇಕು; ಮತ್ತು ಯಾರು ಈ ವಸ್ತುಗಳನ್ನು ಉಪಯೋಗಿಸಲೇ ಬೇಕಾಗಿದೆಯೊ ಅವರೇ ಅವುಗಳಿಗೆ ಮನ್ನಣೆಯನ್ನೀಯಬೇಕು.

೬ ಇಂದು ನಡೆಯಬೇಕಾದ ಸ್ವದೇಶೀ ಚಳುವಳಿಯು ಈ ವಸ್ತುಗಳಿಗೋಸ್ಕರವಲ್ಲ. ಇಂದು ಗ್ರಾಮೋದ್ಯೋಗಗಳನ್ನು ಸಂರಕ್ಷಿಸಬೇಕಾಗಿದೆ. ಎಂದರೆ ಖಾದಿ, ಬೆಲ್ಲ, ಹಳ್ಳಿಯಲ್ಲಿ ಹುಟ್ಟಿದ ಸಕ್ಕರೆ, ಕೈಯಿಂದ ಕುಟ್ಟಿದ ಅಕ್ಕಿ, ಹಳ್ಳಿಯ ಕಾಗದ, ಗಾಣದ ಎಣ್ಣೆ, ಹಳ್ಳಿಯಲ್ಲಿ ಮಾಡಿದ ಪಾತ್ರೆಗಳು, ಅಂಟ್ವಾಳಕಾಯಿ, ಹಲ್ಲು ಉಜ್ಜುವ ಕಡ್ಡಿ, ಪೊರಕೆ, ಹುಲ್ಲಿನ ಚಾಪೆ, ಬುಟ್ಟಿ, ಹಗ್ಗ, ಗುಡಾರ, ಚರ್ಮದ ವಸ್ತುಗಳು ಮುಂತಾದ ಹಳ್ಳಿಯ ನೂರಾರು ಉದ್ಯೋಗಗಳು ಪ್ರೋತ್ಸಾಹವಿಲ್ಲದೆ ಸತ್ತುಹೋಗಿವೆ. ಇಂಥ ಉದ್ಯೋಗಗಳಿಗೆ ಜೀವದಾನ ಕೊಡುವುದು ಹೆಚ್ಚು ಅಗತ್ಯವಿದೆ.

೭ ಈ ವಿಷಯದಲ್ಲಿ ಈಗಿನ ಪಟ್ಟಣಿಗರೂ ಶಿಕ್ಷಿತರೂ ಹಳ್ಳಿಗಳ ಬಗೆಗೆ ತೋರಿಸುವ ಅಲಕ್ಷ್ಯವು ಅಕ್ಷಮ್ಯವಾದುದು.

೮ ಸ್ವಲ್ಪ ವರ್ಷಗಳ ಮೊದಲು ಹಳ್ಳಿಗರು ತಮಗೆ ಬೇಕಾಗುವ ಎಷ್ಟೋ ಪದಾರ್ಥಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಇಷ್ಟೇ ಅಲ್ಲ, ಎಷ್ಟೋ ಜನರು ದೈನಿಕ ಉಪಯೋಗಕ್ಕೆ ಬೇಕಾಗುವ ವಸ್ತುಗಳಿಗಾಗಿ ಹಳ್ಳಿಗರನ್ನು ಅವಲಂಬಿಸಬೇಕಾಗುತ್ತಿತ್ತು. ಆದರೆ ಈಗ ಅದರ ಬದಲಾಗಿ ಅವರು ಪಟ್ಟಣ

ಗಳಿಂದ, ಇಲ್ಲವೆ ಪರದೇಶಗಳಿಂದ ಆ ವಸ್ತುಗಳನ್ನು ತರಿಸಿಕೊಳ್ಳುತ್ತಾರೆ. ಪರಂಪರೆಯಿಂದ ನಡೆದು-ಬಂದ ಹಳ್ಳಿಗರ ಈ ಉದ್ಯೋಗಗಳು ಈಗ ಹಾಳಾಗಿ ಹೋಗಿವೆ. ಈ ಬಗೆಗೆ ಪಟ್ಟಣಿಗರೂ ಶಿಕ್ಷಿತರೂ ಎಳ್ಳಷ್ಟೂ ಯೋಚಿಸುತ್ತಿಲ್ಲ.

೯ ಈ ಮೂಲಕ ಇಂದು ಹಳ್ಳಿಗರು ಕಂಗಾಲಾಗಿದ್ದಾರೆ, ಪರಾವಲಂಬಿಗಳಾಗಿದ್ದಾರೆ. ಐವತ್ತು ವರ್ಷಗಳ ಹಿಂದಿನ ಹಳ್ಳಿಗರಲ್ಲಿದ್ದಷ್ಟು ವಿದ್ಯೆ ಬುದ್ಧಿ ಇಂದಿನ ಹಳ್ಳಿಗರಲ್ಲಿ ಇರುವುದಿಲ್ಲ. ಹಳ್ಳಿಯ ಕಲಾವಿದರಲ್ಲಿಯೂ ಉಳಿದ ಹಳ್ಳಿಗರಂತೆಯೇ ಅವಿದ್ಯೆಯೂ ಅಬುದ್ಧಿಯೂ ಮನೆಮಾಡಿದೆ.

೧೦ ಸೃಷ್ಟಿಯು ಒದಗಿಸಿಕೊಟ್ಟ ಬಿಡುವಿನ ಸಮಯವನ್ನೆಲ್ಲ ಹಳ್ಳಿಗರೆಲ್ಲರೂ ಯಾವುದಾದರೊಂದು ಉಪಯುಕ್ತ ಕಾರ್ಯದಲ್ಲಿ ಕಳೆಯಬೇಕೆಂಬ ಸಂಕಲ್ಪವನ್ನೂ, ಪಟ್ಟಣಿಗರು ಹಳ್ಳಿಗಳಲ್ಲಿ ಉತ್ಪನ್ನವಾದ ವಸ್ತುಗಳನ್ನೆ ಕೊಳ್ಳುವೆವೆಂಬ ಪ್ರತಿಜ್ಞೆಯನ್ನೂ ಮಾಡಿದಾಗಲೆ ಹಳ್ಳಿಗರ ಮತ್ತು ಪಟ್ಟಣಿಗರ ಮುರಿದುಹೋದ ಸಂಬಂಧವು ಪುನಃ ಬೆಸುಗೆಯಾಗುವುದು.

೧೧ ಈ ಕಾರ್ಯಕ್ಕಾಗಿ ದೇಶಭಕ್ತರ ಒಂದು ದೊಡ್ಡ ದಂಡೇ ಸಿದ್ಧವಾದರೂ ಸಾಕಾಗಲಿಕ್ಕಿಲ್ಲ. ಇಂದು ಸ್ವದೇಶೀ ಸಂಘಗಳು ಎಲ್ಲಿ ಕೆಲಸ ಮಾಡುತ್ತಿರುವವೊ ಆ ಕಾರ್ಯ-ಕ್ಷೇತ್ರಗಳಂತೂ ಇದ್ದೇ ಇವೆ. ಆದರೆ ಇದಕ್ಕೂ ಹೆಚ್ಚಿಗೆ ಕಾರ್ಯಕರ್ತರ ಬೇಕಾದಷ್ಟು ವಿಶಾಲವಾದ ಕ್ಷೇತ್ರವು ಹಾಗೆಯೆ ಉಳಿದುಕೊಂಡಿದೆ. ಎಷ್ಟೋ ಉದ್ಯೋಗಗಳನ್ನು ಹುಡುಕಿ ತೆಗೆಯಬೇಕಾಗಿದೆ. ನಾನಾ ತರದ ಕಲಾವಿದರ ಹಿತವನ್ನು ಸಾಧಿಸಬೇಕಾಗಿದೆ. ಇಂದು ನಿರುದ್ಯೋಗದಿಂದ ಹೊಟ್ಟೆಗಿಲ್ಲದೆ ಸಾಯುವವರು ಇಂಥ ಕೆಲಸಗಳನ್ನು ಪ್ರಾಮಾಣಿಕತನದಿಂದಲೂ ಮರ್ಯಾದೆಯಿಂದಲೂ ಮಾಡಿ ಹೊಟ್ಟೆತುಂಬಿಕೊಳ್ಳಬಹುದು

೧೨ ಇದೇ ನಿಜವಾದ ಮತ್ತು ಸಫಲವಾಗುವ ಸಂಪೂರ್ಣ ಸ್ವದೇಶಿ.

## ೪ ವಿಶೇಷ ಉದ್ಯೋಗಗಳು

೧ ಸಮಾಜದ ನಿರ್ವಾಹವು ಸಾಗಬೇಕಾದರೆ, ಅದರ ಸಮೃದ್ಧಿಯೂ ಉನ್ನತಿಯೂ ಆಗಬೇಕಾದರೆ, ಒಕ್ಕಲುತನ ಮತ್ತು ನೂಲುವುದು, ಈ ಎರಡೇ ಉದ್ಯೋಗಗಳು ಸಾಲವು. ಇವುಗಳ ಹೊರತಾಗಿ ಇನ್ನೂ ಎಷ್ಟೋ ಉದ್ಯೋಗಗಳ ಆವಶ್ಯಕತೆ ಇದೆ. ಉದಾಹರಣೆಗೆ: ಧಾತುಗಳು ಕಲ್ಲಿದ್ದಲು ಸೀಮೆ-ಎಣ್ಣೆ ಮುಂತಾದುವುಗಳ ಕಣಿಗಳು, ಮತ್ತು ಖನಿಜ-ಪದಾರ್ಥಗಳಿಗೆ ಸಂಬಂಧಪಟ್ಟ

ಉದ್ಯೋಗಗಳು; ಉಪ್ಪು, ಮೀನು ಮುಂತಾದ ಸಮುದ್ರ-ಪದಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳು; ಕಟ್ಟಿಗೆ, ಅರಗು, ರಬ್ಬರು, ವನಸ್ಪತಿ-ಔಷಧ ಮುಂತಾದ ಅರಣ್ಯಕ್ಕೆ ಸಂಬಂಧಪಟ್ಟ ಉದ್ಯೋಗಗಳು.

೨ ಜೀವನ-ನಿರ್ವಾಹಕ್ಕೆ ಒಕ್ಕಲುತನ ಮತ್ತು ನೇಕಾರಿಕೆಯ ಅವಶ್ಯಕತೆ ಎಷ್ಟು ಇದೆಯೋ ಅಷ್ಟು ಈ ಉದ್ಯೋಗಗಳ ಅವಶ್ಯಕತೆ ಇರಲಿಕ್ಕಿಲ್ಲ. ಆದರೂ ಇಂದಿನ ಸಾಮಾಜಿಕ ಜೀವನಕ್ಕೆ ಇವು ಬೇಕಾಗುವವು ಇವನ್ನು ಅಸಡ್ಡೆ ಮಾಡಲು ಬರುವಂತಿಲ್ಲ.

೩ ಈ ಉದ್ಯೋಗಗಳಿಗೆ ಬಹಳ ಜನರು ಬೇಕಾಗುವುದಿಲ್ಲ. ಆದರೂ ಇವುಗಳಿಂದ ಉತ್ಪನ್ನವಾದ ಪದಾರ್ಥಗಳು ಸರ್ವರಿಗೂ ಬೇಕಾದುವು. ಈ ಪದಾರ್ಥಗಳು ಉಪಭೋಗಕ್ಕೆ ಯೋಗ್ಯವಾದುದರಿಂದ ಈ ಉದ್ಯೋಗಗಳಲ್ಲಿ ಜನತೆಯ ಹಿತಸಂಬಂಧವು ಅಡಕವಾಗಿದೆ.

೪ ಈ ಉದ್ಯೋಗಗಳು ದೇಶದ ಎಲ್ಲ ಭಾಗಗಳಲ್ಲಿ ನಡೆಯುವುದಿಲ್ಲ, ಅಲ್ಲಲ್ಲಿ ಮಾತ್ರ ನಡೆಯುವವು.

೫ ಈ ಉದ್ಯೋಗಗಳೊಳಗಿನ ಮೀನು ಹಿಡಿಯುವ, ಮತ್ತು ಉಪ್ಪು ಮಾಡುವ ಕಸುಬುಗಳು ಒಕ್ಕಲುತನದ ಮತ್ತು ನೂಲುವ ಉದ್ಯೋಗಗಳ ತರಗತಿಗೆ ಸೇರುವವು. ಒಕ್ಕಲುತನ, ಮತ್ತು ನೂಲುವ ಉದ್ಯೋಗದ ವಿಷಯದಲ್ಲಿ ಆರ್ಥಿಕ ನೀತಿ ಯಾವ ರೀತಿಯಾಗಿರುವುದೊ, ಅದೇ ರೀತಿ ಯಾಗಿ ಇವುಗಳ ವಿಷಯವಾಗಿಯೂ ಇರತಕ್ಕದ್ದು. ನೂಲುವುದು ಹೇಗೆ ಪ್ರತಿಯೊಬ್ಬ ಒಕ್ಕಲಿಗನ ಹಕ್ಕೋ, ಹಾಗೆಯೇ ಮೀನು ಹಿಡಿಯುವುದೂ ಸಮುದ್ರದ ದಂಡೆಯ ಮೇಲೆ ಇರುವ ಪ್ರತಿಯೊಬ್ಬನ ಹಕ್ಕು ಹೌದು.

೬ ಮೇಲೆ ಹೇಳಿದ ವಿಶೇಷ ಉದ್ಯೋಗಗಳಿಗಾಗಿ ಬಹಳ ಭಂಡವಲು, ಒಲವು, ಕೌಶಲ್ಯ ಮುಂತಾದುವು ಬೇಕು. ಈ ಉದ್ಯೋಗಗಳು ಸ್ವಂತ ಸಾಹಸದಿಂದಲೂ ನಡೆಯಬಹುದು, ಸರಕಾರದಿಂದಲೂ ನಡೆಯಬಹುದು. ಈ ಉದ್ಯೋಗಗಳ ಮೇಲೆ, ಕೆಳಗೆ ಕಾಣಿಸಿದಂತೆ ಸರಕಾರದ ನಿರ್ಬಂಧಗಳು ಇರತಕ್ಕದ್ದು.

(ಅ) ಇವುಗಳಿಂದ ಹುಟ್ಟುವ ಪದಾರ್ಥಗಳ ಉಪಭೋಗವು ಪ್ರಜೆಗಳಿಗೆ ಅತ್ಯಂತ ಕಡಮೆ ಬೆಲೆಯಲ್ಲಿ ದೊರೆಯತಕ್ಕದ್ದು.

(ಆ) ಈ ಪದಾರ್ಥಗಳು ಚನ್ನಾಗಿ ಮಾಡಲ್ಪಟ್ಟವೂ ಬಹು ದಿನ ಬಾಳು

ವಂತಹವೂ ಇರತಕ್ಕದ್ದು.

(ಇ) ಈ ಉದ್ಯೋಗಗಳು ಸ್ವಂತ ಸಾಹಸದಿಂದ ನಡೆಯುತ್ತಿದ್ದರೆ ಅವುಗಳಿಂದ ಬರುವ ಲಾಭದ ಮೇಲೂ ಅವುಗಳ ಬೆಲೆಯ ಮೇಲೂ ಸರಕಾರದ ಅಂಕುಶವಿರತಕ್ಕದ್ದು.

(ಈ) ಇವುಗಳಲ್ಲಿ ದುಡಿಯುವ ಕೆಲಸಗಾರರ ಸುಖ-ಸಂತೋಷದ ಕಡೆಗೆ ಸರಕಾರವು ಹೆಚ್ಚು ಗಮನಕೊಡತಕ್ಕದ್ದು.

(ಉ) ಇವುಗಳಲ್ಲಿ ಹಲವು ಉದ್ಯೋಗಗಳು ನಾನಾ ರೀತಿಯಾಗಿ ಚಿಕ್ಕ ಭಂಡವಲಿನಿಂದ ಗೃಹೋದ್ಯೋಗಗಳಂತೆ ನಡೆಯಬಲ್ಲುವು. ಅವುಗಳಿಗೆ ವಿಶಾಲ ಸ್ವರೂಪವನ್ನು ಕೊಡಬೇಕಾದ ಸಂದರ್ಭದಲ್ಲಿ ಸರಕಾರವು ಕೆಳಗಿನ ವಿಷಯಗಳ ಕಡೆ ಹೆಚ್ಚು ಗಮನಕೊಡಬೇಕಾಗುವುದು. ಇವುಗಳಿಗಾಗಿ ಬೇಕಾಗುವ ಕಾರ್ಖಾನೆಗಳು ಇವುಗಳ ಗೃಹೋದ್ಯೋಗಗಳನ್ನು ನಾಶಮಾಡುವಂಥವು ಇರಕೂಡದು. ಗೃಹೋದ್ಯೋಗಗಳಿಂದ ಹುಟ್ಟುವ ಪದಾರ್ಥಗಳನ್ನೇ ಹುಟ್ಟಿಸುವ ದೊಡ್ಡ ಕಾರ್ಖಾನೆಗಳಿಗೆ ಪ್ರತಿಬಂಧವಿರತಕ್ಕದ್ದು.

೭ ಬಟ್ಟೆಯ ಕಾರ್ಖಾನೆಗಳು ನಡೆಯುತ್ತಿದ್ದರೂ ಮೇಲಿನ ಕಟ್ಟುಪಾಡುಗಳಿಗೆ ಒಳಪಟ್ಟೇ ನಡೆಯಬೇಕು.

## ೫ ಹಾನಿಕರ ಉದ್ಯೋಗಗಳು

೧ ಜನತೆಯ ನೀತಿಯನ್ನೂ ಆರೋಗ್ಯವನ್ನೂ ಕೆಡಿಸುವಂಥ ಹೆಂಡ, ಅಫು, ಭಂಗಿ, ಗಾಂಜಿ, ಹೊಗೆ-ಸೊಪ್ಪು, ಶಸ್ತ್ರ, ಮದ್ದು-ಗುಂಡು, ಮುಂತಾದ ಉದ್ಯೋಗಗಳನ್ನು ಸ್ವತಂತ್ರನಾಗಿ ಮಾಡಲು ಸರಕಾರವು ಅಪ್ಪಣೆ ಕೊಡಕೂಡದು; ಕೊಟ್ಟರೂ ತನ್ನ ಕಟ್ಟಪ್ಪಣೆಗೆ ಒಳಪಟ್ಟೇ ಮಾಡಲು ಆಸ್ಪದ ಕೊಡತಕ್ಕದ್ದು.

೨ ಈ ಉದ್ಯೋಗಗಳನ್ನು ನಡೆಸುವಾಗ ಸರಕಾರದ ಧೋರಣೆ ಉತ್ಪನ್ನದ ಕಡೆಗೆ ಇರತಕ್ಕದ್ದಲ್ಲ; ಆರೋಗ್ಯ ಮುಂತಾದುವುಗಳ ದೃಷ್ಟಿಯಿಂದ ಎಷ್ಟು ಅವಶ್ಯವೊ ಅಷ್ಟೇ ಪ್ರಮಾಣದಲ್ಲಿ ಅವನ್ನು ಉತ್ಪಾದಿಸುವ ಮತ್ತು ಜನತೆಗೆ ಮುಟ್ಟಿಸುವ ಕಡೆಗೆ ಇರತಕ್ಕದ್ದು.

೩ ಇಂಥ ಪದಾರ್ಥಗಳ ಅಂತರ್-ರಾಷ್ಟ್ರೀಯ ವ್ಯಾಪಾರವನ್ನು ಪರದೇಶೀ ರಾಜ್ಯಗಳ ಇಚ್ಛೆಯಂತೆಯೆ ಮಾಡಗೊಡತಕ್ಕದ್ದು.

## ೬ ಉಪಯುಕ್ತ ಉದ್ಯೋಗಗಳು

೧ ಸಾಮಾಜಿಕ ಜೀವನಕ್ಕೆ ಅಗತ್ಯವಾದ ಈ ಉದ್ಯೋಗಗಳನ್ನಲ್ಲದೆ ಇನ್ನೂ ಎಷ್ಟೋ ಕೆಲಸಗಳನ್ನು ಮಾಡುವವರೂ ಬೇಕಾಗುವರು. ಉದಾಹರಣೆಗೆ: ಶಿಕ್ಷಕರು, ಸೈನಿಕರು, ವಕೀಲರು, ನ್ಯಾಯಾಧೀಶರು, ಅಧಿಕಾರಿಗಳು, ಡಾಕ್ಟರರು, ಅಂಗಡಿಕಾರರು, ಸ್ವಚ್ಛತೆ ಇಡುವವರು – ಭಂಗೀ ಮೊದಲಾದವರು – ಕಾರ್‌ಕೂನರು ಇತ್ಯಾದಿ.

೨ ಈ ಉದ್ಯೋಗಿಗಳು ಯಾವುದೇ ಉಪಭೋಗ್ಯ ವಸ್ತುವನ್ನು ಪ್ರತ್ಯಕ್ಷವಾಗಿ ಉತ್ಪಾದಿಸದಿದ್ದರೂ, ಅಪ್ರತ್ಯಕ್ಷವಾಗಿ ಪದಾರ್ಥಗಳನ್ನು ತಯಾರಿಸುವುದಕ್ಕೂ, ಭೋಗ್ಯ ಹಾಗೂ ಅನರ್ಥಕಾರಕ ಪದಾರ್ಥಗಳ ಯೋಗ್ಯ ವ್ಯವಸ್ಥೆಗೂ ಬೇಕಾಗುವರು.

೩ ಈ ಉದ್ಯೋಗಸ್ಥರನ್ನು ಸಲಹುವುದಕ್ಕಾಗಿ ಸಮಾಜವು ಮಾಡುವ ವೆಚ್ಚಕ್ಕೆ ವ್ಯವಸ್ಥಾ-ವೆಚ್ಚವೆನ್ನಬಹುದು. ಆದ್ದರಿಂದ ಈ ಉದ್ಯೋಗಿಗಳ ಸಂಖ್ಯೆಯೂ ಅವರಿಗೋಸ್ಕರ ಮಾಡುವ ವ್ಯವಸ್ಥಾ-ವೆಚ್ಚವೂ ಜನ-ಸಂಖ್ಯೆಗೆ ಮತ್ತು ಜನರ ಸಮೃದ್ಧಿಗೆ ಅನುಗುಣವಾಗಿರಬೇಕೇ ಹೊರತು ಇದನ್ನು ಮೀರಕೂಡದು.

೪ ಈ ಉದ್ಯೋಗಗಳು ನಡೆಯಬೇಕಾದುದು ಜನಸೇವಾ ದೃಷ್ಟಿಯಿಂದಲೇ ಹೊರತು, ಗಳಿಸಬೇಕು ಶ್ರೀಮಂತನಾಗಬೇಕು ಎಂಬ ದೃಷ್ಟಿಯಿಂದಲ್ಲ. ಈ ವೃತ್ತಿಯವರಿಗೆ ಸಮಾಜದ ಸ್ಥಿತಿಯು ಮತ್ತು ಸಮೃದ್ಧಿಯ ಮರ್ಯಾದೆಯಲ್ಲಿಯೆ ಇದ್ದುಕೊಂಡು ಜೀವನ-ನಿರ್ವಾಹವನ್ನು ಸಾಗಿಸಲು ಬೇಕಾದಷ್ಟು ಸ್ಥಿರವಾದ ಸಂಬಳಕೊಟ್ಟು, ಅವರನ್ನು ನಿಶ್ಚಿಂತರನ್ನಾಗಿ ಮಾಡಬೇಕು. ಈ ಉದ್ಯೋಗಿಗಳು ಇಷ್ಟರಿಂದಲೆ ಸಂತುಷ್ಟರಾಗಿರತಕ್ಕದ್ದು. ಹೀಗೆ ದೊರೆತ ಪರಿಶ್ರಮದ ಫಲವನ್ನು ಪಡೆದ ಮೇಲೆ ಗಳಿಕೆಯ ಇನ್ನಾವ ಉದ್ಯೋಗವನ್ನೂ ಮಾಡದೆ ತಮ್ಮಲ್ಲಿದ್ದ ಜ್ಞಾನದ ಲಾಭವನ್ನು ಜನರಿಗೆ ಆದಷ್ಟು ಹೆಚ್ಚಾಗಿ ಮಾಡಿಕೊಡತಕ್ಕದ್ದು.

೫ ಹೀಗೆ ಒಂದು ಮಿತಿಯಲ್ಲಿದ್ದುಕೊಂಡು ಈ ಉದ್ಯೋಗಗಳನ್ನು ನಡೆಸಿದರೆ ಅದರಿಂದ ಸಮಾಜದ ಸರ್ವೋದಯಕ್ಕೆ ನೆರವು ಸಿಕ್ಕುವುದು. ಭೋಗ್ಯವಲ್ಲದ ಧನ-ಲಾಲಸೆಯೂ ಧನಾರ್ಜನೆಗಾಗಿ ಮಾಡಲ್ಪಡುವ ಕುಟಿಲ ಯುಕ್ತಿಗಳೂ ಇಲ್ಲದಂತಾಗುವವು.

೬ ಧನ ಸಂಗ್ರಹದ ಇಚ್ಛೆ ಇರುವವರಿಗೆ, ಭೂಮಿ ಮನೆ ಆಭರಣಗಳು ಬೇಕೆನ್ನುವವರಿಗೆ, ಸಂತತಿ ಹೆಚ್ಚಿಸಬೇಕೆನ್ನುವವರಿಗೆ ಉದ್ಯೋಗಗಳೇ ಅವರ ಮನಸ್ಸನ್ನೆಳೆಯುವ ಆಕರ್ಷಣ-ದ್ವಾರಗಳಾಗಿರಬೇಕು ಅವರಿಗೆ ಉದ್ಯೋಗ ಗಳಲ್ಲಿ ಆದಷ್ಟು ಹೆಚ್ಚು ಅನುಕೂಲತೆಗಳು ಇರತಕ್ಕದ್ದು. ಆದರೆ ಉದ್ಯೋಗಿ ಗಳಿಗೆ, ಈ ಪ್ರಕರಣದಲ್ಲಿ ವರ್ಣಿಸಲ್ಪಟ್ಟ ಉದ್ಯೋಗಗಳ ಮೂಲಕ ಇಂತಿಷ್ಟೇ ಸಂಪಾದನೆಯಾಗಬೇಕೆಂದು ನಿರ್ಬಂಧವಿರಬೇಕು.

೭ ಯಾರು ಮಿತಿಯನ್ನು ಮೀರದೆ ಸ್ಥಿರವಾದ ನಿಶ್ಚಿಂತ ನಿರ್ವಾಹವನ್ನು ದೊರಕಿಸಬೇಕೆನ್ನುವರೊ, ಜನ-ಸೇವೆಯನ್ನು ಮಾಡಬೇಕೆನ್ನುವರೊ, ಅವರಿಗೇ ಈ ಉದ್ಯೋಗಗಳು ಮೀಸಲಾಗಿರಬೇಕು. ಹೀಗೆ ಮಾಡುವುದರಿಂದ ಈ ಉದ್ಯೋಗಗಳ ಪ್ರವೇಶಕ್ಕೆ ಬೇಕಾಗುವ ಜ್ಞಾನವೂ ಚರಿತ್ರ-ಬಲದ ಉಚ್ಚ ಧೋರಣೆಯೂ ಉಂಟಾಗಬಲ್ಲುದು.

## ೭ ಲಲಿತ ಕಲೆಗಳು

೧ ಸಂಗೀತ, ಕಥೆ, ವಾರ್ತೆ, ಚಿತ್ರಕಲೆ, ನೃತ್ಯ, ನಾಟಕ, ಸಿನೇಮಾ ಮುಂತಾದ ಲಲಿತ ಕಲೆಗಳು ಮಿತವಾಗಿದ್ದರೆ ಅವು ಜನರ ನಿರ್ದೋಷಿಯಾದ ಮನರಂಜನೆಗೂ ಜ್ಞಾನಪ್ರಾಪ್ತಿಗೂ ಭಾವನೆಯ ಬೆಳವಣಿಗೆಗೂ ಸಾಧನ ಗಳಾಗುವವು. ಮೇರೆ ಮೀರಿದರೆ ಸರಾಯಿ, ಹೆಂಡ, ಅಫೀಮು ಮುಂತಾದುವು ಗಳಂತೆ ಇವೂ ಹಾನಿಕರ ಚಟಗಳಾಗುವವು.

೨ ಸಾಮಾನ್ಯವಾಗಿ ಇಂಥ ಕಲೆಗಳನ್ನು ಉಪಜೀವನದ ಉದ್ಯೋಗ ಗಳನ್ನಾಗಿ ಯಾರೂ ಮಾಡಿಕೊಳ್ಳತಕ್ಕದ್ದಲ್ಲ. ಪ್ರತಿಯೊಬ್ಬ ಮನುಷ್ಯನು ತನ್ನ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಅವನಿಗೆ ಯಾವುದೊಂದು ಕಲೆಯಲ್ಲಿ ರುಚಿಯು ಹುಟ್ಟುವಂತೆ ಶಿಕ್ಷಣದ ಧೋರಣವಿರಬೇಕು.

೩ ಮನರಂಜನೆಗೋಸ್ಕರ ಇಂಥ ಕಲೆಗಳ ಪ್ರದರ್ಶನವನ್ನು ಜನರು ತಾವೇ ಉತ್ಸಾಹದಿಂದಲೆ ಏರ್ಪಡಿಸಿ ಮಂಡಳಗಳ ಮೂಲಕ ಜರುಗಿಸಿಕೊಳ್ಳ ತಕ್ಕದ್ದು.

೪ ಇಂಥ ಕಲೆಗಳ ರುಚಿ ಮೇರೆ ಮೀರದಂತೆ, ಅನೀತಿಯ ಕಡೆಗೆ ಒಲಿಯ ದಂತೆ, ಆದರೆ ಹಾನಿಗೊಳಗಾಗದಂತೆ ಪ್ರದರ್ಶನ, ಕಚೇರಿ ಮುಂತಾದುವುಗಳ ಮೇಲೆ ಕಡುತರವಾದ ದೃಷ್ಟಿಯೂ ಮೇಲ್ವಿಚಾರಣೆಯೂ ಇರತಕ್ಕದ್ದು.

೫ ಈ ಕಲೆಗಳ ಬಗ್ಗೆ ಸಾಮಾನ್ಯ ರೀತಿ-ನೀತಿಯನ್ನು ವಿವರಿಸಿದ್ದಾಯಿತು. ಇಂತಹ ಕಲೆಗಳಿಂದ ನಿರ್ವಾಹ ಸಾಗಿಸಕೂಡದೆಂದು ನಿರ್ಬಂಧ ಹಾಕಿದರೆ ಅದರಿಂದ ಹಿತವಾಗದಿರುವ ಸಂಭವವುಂಟು. ಅಲ್ಲದೆ ಆ ನಿರ್ಬಂಧವು ವ್ಯವಹಾರದಲ್ಲಿ ಉಳಿಯುವುದು ಕಠಿಣ. ಆದ್ದರಿಂದ ಇಂಥ ಕಲೆಗಳ ನಿರ್ದೋಷ, ಜ್ಞಾನಪ್ರದ, ಮತ್ತು ಸದ್ಭಾವಪೋಷಕ ಉಪಯೋಗವು ಜನರಿಗೆ ದೊರೆಯುವಂತೆ ವ್ಯವಸ್ಥೆ ಮಾಡುವುದೂ ಹಿಂದಿನ ಪ್ರಕರಣದಲ್ಲಿ ಉಪಯುಕ್ತ ಉದ್ಯೋಗಗಳ ವಿಷಯದಲ್ಲಿ ಸೂಚಿಸಿದ ಪ್ರಕಾರ ಸಮೃದ್ಧಿಯ ಮೇರೆಯನ್ನಿಟ್ಟುಕೊಂಡು ಈ ಕಲೆಗಳ ಉಪಾಸನೆ ಮಾಡುವವರಿಗೆ ನಿಶ್ಚಿತ ಸಂಬಳ ಕೊಡುವುದೂ ಈ ಕಲೆಗಳ ಅಭ್ಯಾಸಕ್ಕಾಗಿ ಸಚ್ಚರಿತ್ರ ಮನುಷ್ಯರನ್ನು ದೊರಕಿಸುವುದೂ ಗ್ರಾಮ ಪಂಚಾಯತಿಗಳ ಒಂದು ಕರ್ತವ್ಯವಾಗಬೇಕು.

೬ ಸ್ವತಂತ್ರವಾಗಿ ಈ ಉದ್ಯೋಗಗಳನ್ನು ಮಾಡಬೇಕೆನ್ನುವವರ ಮೇಲೆ ನೀತಿಯ ನಿರ್ಬಂಧನೆ ಇರಬೇಕು; ಅನುಮತಿ, ವಿಶಿಷ್ಟ ಕರ ಮುಂತಾದ ಬಂಧನಗಳೂ ಇರತಕ್ಕದ್ದು.

೭ ಇಂಥ ಕಲೆಗಳ ಯೋಗ್ಯ ಪೋಷಣೆಗಾಗಿಯೂ ಅಭಿವೃದ್ಧಿಗಾಗಿಯೂ ಸರಕಾರವು ಅನುಕೂಲತೆಗಳನ್ನೂ ಯೋಗ್ಯ ಕಲಾವಿದರಿಗೆ ಉತ್ತೇಜನವನ್ನೂ ಒದಗಿಸಿಕೊಡಬಹುದು. ಇದರಲ್ಲಿ ತಾರತಮ್ಯದ ಭಂಗವಾಗದಿದ್ದರೆ ಹೀಗೆ ಮಾಡುವುದು ಯೋಗ್ಯವೆನಿಸುವುದು.

೮ ತನ್ನ ಉದ್ಯೋಗದಲ್ಲಿ ಕಲಾ-ಪ್ರವೃತ್ತಿಯನ್ನು ತೋರಿಸುವ ಪ್ರತಿಯೊಬ್ಬ ಶಿಲ್ಪಿಯೂ ಉತ್ತೇಜನಕ್ಕೆ ಪಾತ್ರನು. ಈ ದೃಷ್ಟಿಯನ್ನಿಟ್ಟುಕೊಂಡು ಕಲೆಯ ಪೋಷಣೆಯ ಕಡೆಗೆ ಸರಕಾರವು ಮೊದಲು ಗಮನಕೊಡುವುದು ಉಚಿತವಾದದ್ದು.

ಅಷ್ಟಮ ಖಂಡ

# ಗೋಪಾಲನೆ

—•—

## ೧ ಧಾರ್ಮಿಕ ದೃಷ್ಟಿ

೧ ಹಿಂದೂ ಧರ್ಮದಲ್ಲಿ ಗೋಪಾಲನೆಗೆ ಧಾರ್ಮಿಕ ಮಹತ್ವವು ಬಂದಿದೆ, ಗೋವಧೆ ಮಹಾ ಪಾತಕವೆನಿಸಿದೆ, ಗೋಪಾಲನೆಯ ಭಾರ ಅರಸರ ಮೇಲೆ ಮತ್ತು ವೈಶ್ಯರ ಮೇಲೆಯೆ ಹೊರಿಸಲ್ಪಟ್ಟಿದೆ. ಆದ್ದರಿಂದ ಈ ಕಾರ್ಯಕ್ಕಾಗಿ ಜನರಿಂದ ಲಕ್ಷಾಂತರ ರೂಪಾಯಿಗಳು ದಾನವೆಂದು ದೊರೆಯುತ್ತವೆ. ಆದರೂ ಕಾರ್ಯವಾಹಕರಲ್ಲಿ ಯೋಗ್ಯ ದೃಷ್ಟಿ ಇಲ್ಲದ್ದರಿಂದ ಗೋ-ಭಕ್ಷಕ ದೇಶಗಳಿಗಿಂತಲೂ ಹಿಂದೂ ದೇಶದಲ್ಲಿ ದನಗಳ ಸ್ಥಿತಿ ಕರುಣಾಜನಕವಾಗಿದೆ.

೨ ಗೋಪಾಲನೆಯ ವಿಷಯದಲ್ಲಿರುವ ನಮ್ಮ ಧಾರ್ಮಿಕ ದೃಷ್ಟಿಯಲ್ಲಿ ಕೆಳಗಿನಂತೆ ಮಾರ್ಪಾಡೂ ವಿಕಾಸವೂ ಅಗತ್ಯವಿದೆ:

(ಅ) ಅಂಗಹೀನ, ನಿರ್ಬಲ ದನಗಳನ್ನು ಪಾಲಿಸುವುದಷ್ಟೇ ಗೋಪಾಲನೆಯ ಕಾರ್ಯಕ್ಷೇತ್ರವಲ್ಲ. ಹಸುವಿನ, ಎತ್ತಿನ ಜಾತಿಯಲ್ಲಿ ಸುಧಾರಣೆಯನ್ನು ಮಾಡಬೇಕು. ಹಸುಗಳು ಹೆಚ್ಚು ಹಾಲು ಕರೆಯುವಂಥವೂ ಸತ್ವವುಳ್ಳವೂ ಆಗುವಂತೆ ಮಾಡಬೇಕು. ಎತ್ತಿನ ಜಾತಿಯಲ್ಲಂತೂ ಒಳ್ಳೇ ಸುಧಾರಣೆ ಆಗಬೇಕು. ಇವು ಕೂಡ ಗೋಪಾಲನ-ಧರ್ಮದ ಮುಖ್ಯ ಅಂಗಗಳು.

(ಆ) ಆದ್ದರಿಂದ ದನಗಳ ದೊಡ್ಡಿಗಳು ಜನರಿಗೆ ವಸ್ತುಪಾಠವನ್ನು ಕಲಿಸುವ ಆದರ್ಶ ಗೋಶಾಲೆಗಳಾಗಿರಬೇಕು. ದನಗಳ ಗೋದಲೆ, ಹುಲ್ಲು ಹಾಕುವ ದಾಣಿ ಕಟ್ಟುವ ಪದ್ಧತಿ, ಇವುಗಳಿಂದಾಗುವ ಪರಿಣಾಮವನ್ನು ತೋರಿಸುವ ಪತ್ರಿಕೆ, ಇವೆಲ್ಲವುಗಳಲ್ಲಿ ಅಚ್ಚುಕಟ್ಟೂ ಅಭ್ಯಾಸ-ದೃಷ್ಟಿಯೂ ಇರಬೇಕು.

(ಇ) ಈ ದೊಡ್ಡಿಗಳು ಎತ್ತಿನ ಸಂತತಿಯನ್ನು ಸುಧಾರಿಸುವುದರಲ್ಲಿ ಗ್ರಾಮದ ಜನರಿಗೆ ಲಾಭಕಾರಿಯಾಗುವ ರೀತಿಯನ್ನೇ ಉಪಯೋಗಿಸಿ ಹೋರಿಗಳನ್ನು ಪಾಲಿಸತಕ್ಕದ್ದು.

(ಈ) ದನಗಳ ದೊಡ್ಡಿಗಳಲ್ಲಿ ಚರ್ಮಾಲಯ ವಿಭಾಗವು ಕೂಡ ಇರ

ತಕ್ಕದ್ದು. ಸತ್ತ ದನಗಳ ಚರ್ಮದ ಉದ್ಯೋಗವನ್ನು ತಿರಸ್ಕಾರದ ದೃಷ್ಟಿಯಿಂದ ನೋಡಬಾರದು ಮಾತ್ರವಲ್ಲ, ಆ ಉದ್ಯೋಗವನ್ನು ಕರ್ತವ್ಯ-ದೃಷ್ಟಿಯಿಂದ ಮಾಡತಕ್ಕದ್ದು. ತನ್ನ ಸತ್ತ ದನಗಳ ಚರ್ಮವನ್ನೂ ಎಲುಬು ಮಾಂಸಗಳನ್ನೂ ಉಪಯೋಗಿಸಲು ಕೊಡದ ಒಡೆಯನು ದನಗಳ ಕೊಲೆಯ ಉತ್ತೇಜನಕ್ಕೆ ಕಾರಣನಾಗುತ್ತಾನೆಂದು ತಿಳಿಯತಕ್ಕದ್ದು. ಜೀವ-ದಯಾ ಸಂಘಗಳು ಸತ್ತ ದನಗಳ ಎಲುಬು ಮಾಂಸ ಚರ್ಮವನ್ನೇ ಬಳಸುತ್ತೇವೆಂದು ಹಟಹಿಡಿಯತಕ್ಕದ್ದು.*

(ಉ) ಬದುಕಿದ ದನಗಳಿಗಿಂತಲೂ ಸತ್ತ ದನಗಳ ಬೆಲೆ ಹೆಚ್ಚೆಂದು ತಿಳಿಯುವುದು ಧಾರ್ಮಿಕ ದೃಷ್ಟಿಯಿಂದ ಭಯಾನಕ. ಆದ್ದರಿಂದ ಬದುಕಿದ ದನಗಳ ಬೆಲೆಯ ಮಹತ್ವವನ್ನು ಹೆಚ್ಚಿಸಲು ಯತ್ನಿಸುವುದು ಧಾರ್ಮಿಕ ಕರ್ತವ್ಯವೆಂದು ತಿಳಿಯತಕ್ಕದ್ದು.

(ಊ) ಹೋರಿಗಳ ಕಸಿ ಮಾಡುವುದು ಅಗತ್ಯ. ದನಗಳ ದೊಡ್ಡಿಗಳು, ನೋವಾಗದಂತೆ ಕಸಿ ಮಾಡುವ ಶಾಸ್ತ್ರೀಯ ಪದ್ಧತಿಯನ್ನು ಚನ್ನಾಗಿ ಅರಿತುಕೊಂಡು ಆ ಮೇಲೆ ಅದರ ಯೋಜನೆಯನ್ನು ಕೈಕೊಳ್ಳತಕ್ಕದ್ದು.

(ಎ) ಪ್ರಾಣಿಯು ಅತ್ಯಂತ ಕಷ್ಟದಲ್ಲಿ ತೊಳಲಾಡುತ್ತಿದ್ದು ಅದು ಅಂಗಹೀನವಾಗಿ ಕೂಡ ಬದುಕುವ ಆಶೆ ಇಲ್ಲದಿದ್ದಾಗ, ಮತ್ತು ಅದಕ್ಕೆ ವೇದನೆ ಹೆಚ್ಚಾಗುತ್ತ ಹೋಗುವಾಗ, ಅದರ ಇಹಲೋಕ-ಯಾತ್ರೆಯನ್ನು ಮುಗಿಸಲು ನೋವಾಗದ ಉಪಾಯವನ್ನು ಕೈಕೊಳ್ಳುವುದು ದಯಾಧರ್ಮವೆಂದು ಒಪ್ಪತಕ್ಕದ್ದು.

## ೨ ಅನ್ಯ ಪ್ರಾಣಿಗಳ ಪಾಲನೆ

೧ ಗೋ ಎಂಬ ಶಬ್ದದಲ್ಲಿ ಪ್ರಾಣಿಮಾತ್ರವೆಲ್ಲವೂ ಅಡಕವಾಗಿರುವುದೆಂಬುದನ್ನು ಮರೆಯತಕ್ಕದ್ದಲ್ಲ. ಅಹಿಂಸೆಯ ದೃಷ್ಟಿಯಿಂದ ವ್ಯವಹಾರದಲ್ಲಿ ಅದನ್ನು ಸ್ವಲ್ಪ ವಿವೇಕದಿಂದ ಉಪಯೋಗಿಸುವುದು ಅವಶ್ಯ. ಪ್ರಾಣಿಗಳನ್ನು ವಿವೇಕ

* ಎಲುಬು ಮಾಂಸಗಳ ಬಳಕೆ ಎಂದರೆ ತಿನ್ನುವುದೆಂದು ಅರ್ಥವಲ್ಲ. ಅವುಗಳಿಂದ ಗೊಬ್ಬರವನ್ನೂ ಇತರ ಉಪಯುಕ್ತ ವಸ್ತುಗಳನ್ನೂ ಮಾಡಿಕೊಳ್ಳತಕ್ಕದ್ದು ಎಂದು ಸೂಚಿಸಬಯಸುತ್ತೇನೆ.

ವಿಲ್ಲದೆ ಸಾಕುವುದರ ಪರಿಣಾಮ ಹಿಂಸೆಗೆ ಉತ್ತೇಜನವನ್ನೀಯುತ್ತದೆ.

೨ ಹೀಗೆ ವಿವೇಕವಿಲ್ಲದ್ದರಿಂದ ಎಮ್ಮೆಯ ಹಾಲಿನ, ಮತ್ತು ತುಪ್ಪದ ಉಪಯೋಗವು ಆಕಳು ಮತ್ತು ಎಮ್ಮೆಯ ಹಿಂಸೆಯನ್ನು ಹೆಚ್ಚಿಸಿದೆ. ಇದಕ್ಕೆ ಕಾರಣಗಳು ಇಂತಿವೆ:

(ಅ) ಎಮ್ಮೆಯು ಜವುಳು, ತಂಪು ಪ್ರದೇಶದಲ್ಲಿರತಕ್ಕ ಪ್ರಾಣಿ. ಆದ್ದರಿಂದ ಅದನ್ನು ಉಷ್ಣವಾದ ಒಣ ಪ್ರದೇಶದಲ್ಲಿ ಒಯ್ದಿಟ್ಟುಕೊಂಡರೆ ಕ್ರೂರತನವಾಗುತ್ತದೆ.

(ಆ) ಕೋಣದ ಉಪಯೋಗವೇ ಇಲ್ಲವಾದ್ದರಿಂದ ಅದರ ಕೊಲೆಯಾಗುತ್ತಿದೆ.

(ಇ) ಈಗ ಹೋರಿಗಳ ಸಲುವಾಗಿ ಹಸುವಿನ ಪಾಲನೆಯೂ ಹಾಲಿನ ಸಲುವಾಗಿ ಎಮ್ಮೆಯ ಪಾಲನೆಯೂ ಆಗುತ್ತಿದೆ. ಇದರಿಂದ ಎಮ್ಮೆಯಿಂದ ಆಗುವಷ್ಟು ಲಾಭ ಹಸುವಿನಿಂದ ಆಗುವುದಿಲ್ಲ. ಆದ್ದರಿಂದ ಜನರು, ಆಕಳು ಹೆಚ್ಚಿಗೆ ಹಾಲು ಕೊಡುವಂತೆ ಮಾಡಲು ಪ್ರಯತ್ನಿಸುವುದಿಲ್ಲ. ಇದರಿಂದ ಅದರ ಕೊಲೆಗೆ ಉತ್ತೇಜನ ದೊರೆಯುತ್ತದೆ.

೩ ಆದ್ದರಿಂದ ಎಮ್ಮೆಯ ಹಾಲು ಬೆಣ್ಣೆಯನ್ನು ಬಿಡುವುದರ ಮೂಲಕ ಅದರ ಪಾಲನೆಯನ್ನು ನಿಲ್ಲಿಸುವುದು ಯೋಗ್ಯ. ಇದರ ಅರ್ಥ, ಎಮ್ಮೆಯನ್ನು ಕೊಲ್ಲಿಸಬೇಕೆಂದಲ್ಲ. ಆದರೆ ಅದರ ಬೆಳವಣಿಗೆಗೆ ಉತ್ತೇಜನ ಕೊಡಲಾಗದು.

೪ ಹೀಗೆಯೇ ಯೋಚಿಸಿದರೆ ಬೀದಿಯಲ್ಲಿ ಅಲೆದಾಡುವ ನಾಯಿಗಳಿಗೆ ಆಹಾರ ಹಾಕುವುದೂ ಧರ್ಮವೆನಿಸುವುದಿಲ್ಲ. ನಾಯಿಯನ್ನು ಪ್ರೀತಿಸುವವರು ಅದನ್ನು ಸರಿಯಾಗಿ ಸಾಕಬೇಕು, ಅದರ ಸರ್ವ ವಿಧದ ಆರೈಕೆಯನ್ನೂ ಮಾಡಬೇಕು. ಆದರೆ ಅವುಗಳಿಗೆ ಆಹಾರವನ್ನು ಹಾಕಿ ಬೀದಿಯಲ್ಲಿ ಅಲೆದಾಡಗೊಡುವುದರಿಂದ ಅವುಗಳನ್ನು ಪೀಡಿಸಿದಂತಾಗುವುದು. ಇದರಿಂದ ಅವುಗಳ ಅಧೋಗತಿಯೂ ಜನರಿಗೆ ಅನಾನುಕೂಲತೆಯೂ ತಪ್ಪಿದ್ದಲ್ಲ. ಅಲ್ಲದೆ ಅಂಥ ನಾಯಿಗಳಿಗೆ ಹುಚ್ಚು ಹಿಡಿಯುವ ಸಾಧ್ಯತೆಯೂ ಉಂಟು.

೫ ಕೋತಿ, ಪಾರಿವಾಳ, ಹುಳು ಮುಂತಾದ ಪ್ರಾಣಿ-ಜಂತುಗಳಿಗೆ ಆಹಾರ ಹಾಕುವುದೂ ಧರ್ಮವೆನಿಸುವುದಿಲ್ಲ. ಯಾವ ಪ್ರಾಣಿಗಳ ಜೀವನವು ಮನುಷ್ಯನನ್ನು ಅವಲಂಬಿಸಿಕೊಂಡಿರುವುದಿಲ್ಲವೊ, ಯಾವ ಪ್ರಾಣಿಗಳ ಉಪಯೋಗವೂ ಮನುಷ್ಯನಿಗೆ ಇರುವುದಿಲ್ಲವೊ, ಅಂಥ ಪ್ರಾಣಿಗಳನ್ನು ಸಾಕುವುದು

ತರವಲ್ಲ. ಇಂಥ ಪ್ರಾಣಿಗಳನ್ನು ಸಾಕುವುದರಿಂದ ಮನುಷ್ಯನಿಗೆ ಹೆಚ್ಚು ತೊಂದರೆಯಾಗುವುದಲ್ಲದೆ ಆ ಪ್ರಾಣಿಗಳ ಹಿಂಸೆಯೂ ಹೆಚ್ಚಾಗುವುದು.

೬ ಪ್ರಾಣಿಗಳ ಅಹಿಂಸೆಯನ್ನು ಕುರಿತು ಜೈನರು ಮತ್ತು ವೈಷ್ಣವರು ಯಾವ ದೃಷ್ಟಿಯನ್ನಿಟ್ಟುಕೊಂಡಿದ್ದಾರೊ ಆ ದೃಷ್ಟಿಯನ್ನು ಇಟ್ಟುಕೊಳ್ಳದವರಿಂದ ಇಂಥ ಪ್ರಾಣಿಗಳ ಉಪದ್ರವವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆಗಾಗ ಇವುಗಳ ಕೊಲೆಯಾದರೆ ಅದರಲ್ಲಿ ಆಶ್ಚರ್ಯದ ಸಂಗತಿಯೇನೂ ಇರುವುದಿಲ್ಲ. ಇಂಥ ಪ್ರಾಣಿಗಳಿಗೆ ಆಹಾರ ಹಾಕುವುದು ಧರ್ಮವೆಂದು ತಿಳಿಯುವ ವರ್ಗವೇ ಈ ಪ್ರಾಣಿಗಳ ವಧೆಗೆ ಹೊಣೆಯಾಗಿರುವುದು. ಇದರಿಂದ ಆ ವರ್ಗವು ಕುಪಿತವಾಗುವುದು ಯೋಗ್ಯವಲ್ಲ.

## ೩ ಪ್ರಾಣಿಗಳ ಬಗೆಗೆ ಕ್ರೂರತನ

೧ ಪ್ರಾಣಿಯನ್ನು ಒಂದೇ ಏಟಿನಿಂದ ಕೊಲ್ಲುವುದಕ್ಕಿಂತ ಅದರೊಡನೆ ಕ್ರೂರತನದಿಂದ ವರ್ತಿಸುವುದು ಕಡಮೆ ತರದ ಹಿಂಸೆಯಲ್ಲ. ಇಂತಹ ಹಿಂಸೆಯು ಹಿಂದೂ ಜನರಲ್ಲಿ ಚನ್ನಾಗಿ ಮನೆಮಾಡಿಕೊಂಡಿದೆ.

೨ ಫೂಂಕಾ ಎಂಬ ಕ್ರಿಯೆ, ಕಸಿಮಾಡಿಸುವುದು, ಅರೆಹೊಟ್ಟೆ ಹಾಕುವುದು, ಬಾರುಕೋಲಿನಿಂದ ಹೊಡೆಯುವುದು, ಮಿತಿಮೀರಿ ಭಾರಹೇರುವುದು, ಬಾಲ ಮುರಿಯುವುದು, ಆಹಾರಕ್ಕಾಗಿ ಕೊರಗಿಸುವುದು, ಗಾಯವಾದ ಅಂಗಗಳ ಶುಶ್ರೂಷೆ ಮಾಡದಿರುವುದು, ಮೂಗುದಾಣ ಹಾಕುವುದು ಮುಂತಾದ ರೀತಿಗಳು ಅಮಾನುಷವೂ ಕ್ರೂರವೂ ಇರುವವು.

೩ ಇವುಗಳ ಪರಿಣಾಮವು ಭಯಾನಕವಾಗಿದೆ. ಹಿಂದುಸ್ತಾನದಲ್ಲಿ ಆಕಳು, ಎತ್ತು, ಎಮ್ಮೆ, ಕುದುರೆ, ಕತ್ತೆ, ಬೆಕ್ಕು, ನಾಯಿ ಮುಂತಾದ ಪ್ರಾಣಿಗಳು ತೀರ ಕಂಗೆಡುವ ಸ್ಥಿತಿಯಲ್ಲಿ ಬಾಳುತ್ತಿವೆ.

## ೪ ಗೋವಧೆ

೧ ಹಿಂದೂ ಜನರ ಧಾರ್ಮಿಕ ದೃಷ್ಟಿಯನ್ನು ಸಂತೋಷಪಡಿಸುವುದಕ್ಕಾಗಿ ಮಾತ್ರವಲ್ಲ, ಹಿಂದುಸ್ತಾನದ ಆರ್ಥಿಕ ದೃಷ್ಟಿಯಿಂದಲೂ ಗೋವಧೆಗೆ ನಿರ್ಬಂಧ ವಿರತಕ್ಕದ್ದು.

೨ ಆದರೆ ಹೀಗಾಗದಿರುವ ವರೆಗೆ ಹಿಂದೂಗಳು ಧೈರ್ಯದಿಂದ ಇದ್ದು

ಕೊಂಡು ತಿಳಿಹೇಳುವಿಕೆಯಿಂದಲೂ ಸೇವೆಯಿಂದಲೂ ಗೋವಧೆಯನ್ನು ನಿಲ್ಲಿಸಲು ಯತ್ನಿಸತಕ್ಕದ್ದು.

೩ ಗೋವಧೆಯನ್ನು ನಿಲ್ಲಿಸಲು ಮನುಷ್ಯ (ಮುಸಲ್ಮಾನ್) ವಧೆಯನ್ನು ಮಾಡುವುದು ಅಧರ್ಮ.

೪ ಹಸುವಿನ ಬಲಿಕೊಡುವುದು ಕರ್ತವ್ಯಕರ್ಮವಲ್ಲವೆಂದು ತಿಳಿದುಕೊಂಡು ಮುಸಲ್ಮಾನರು ಅದನ್ನು ನಿಲ್ಲಿಸುವುದು ಪರಮ ಸತ್ಕೃತ್ಯವೆನ್ನಿಸುವುದು. ಕನಿಷ್ಠ ಪಕ್ಷ ಹಿಂದೂಗಳ ಅಂತಃಕರಣಕ್ಕೆ ನೋವಾಗಬಾರದೆಂದು ಮರೆಯಲ್ಲಿ ಇಂಥ ವಧೆಯನ್ನು ಮಾಡುವುದು ಇದಕ್ಕಿಂತಲೂ ಕಡಮೆ ತರಗತಿಯ ಸತ್‌ಕೃತ್ಯವೆನಿಸುವುದು.

೫ ಹಿಂದೂ ಜನರ ಅಂತಃಕರಣವು ನೋಯುವ ಹಾಗೆ ಬಹಿರಂಗದಲ್ಲಿ ಗೋವಧೆಯನ್ನು ಮಾಡುವವರೂ ವಧ್ಯಗೋವನ್ನು ಮೆರೆಸುವವರೂ ಧರ್ಮಕಾರ್ಯವನ್ನು ಮಾಡಿದಂತಾಗುವುದಿಲ್ಲ. ಇಂಥ ಕೃತ್ಯದ ಆಚರಣೆಗೆ ನಿರ್ಬಂಧವಿರತಕ್ಕದ್ದು.

೬ ಯಾವುದೊಂದು ಹಬ್ಬದಲ್ಲಿ ಗೋ-ಬಲಿಯನ್ನು ಕೊಡುವ ಮುಸಲ್ಮಾನರಿಗಿಂತ, ತಿನ್ನುವುದಕ್ಕಾಗಿ ದಿನವೂ ಗೋವಧೆಯನ್ನು ಮಾಡಿಸುವಂಥ ಇಂಗ್ಲಿಷ್ ರಾಜ್ಯವು ಹಿಂದೂಗಳಿಗೂ ಹಿಂದುಸ್ಥಾನಕ್ಕೂ ಹೆಚ್ಚಿನ ಅಪಕಾರವನ್ನು ಮಾಡುತ್ತಿದೆ.

## ೫ ಸತ್ತ ದನಗಳು

೧ ತಾವು ಸಾಕಿದ ದನಗಳು ಸತ್ತ ಬಳಿಕ ಅವುಗಳ ಎಲುಬು, ಮಾಂಸ, ಮತ್ತು ಚರ್ಮವನ್ನು ಉಪಯೋಗಿಸುವುದರಲ್ಲಿ ಉದಾರತೆಯಿಲ್ಲವೆಂದು ಎಷ್ಟೋ ಜನಗಳ ಭಾವನೆಯಾಗಿದೆ. ಆದ್ದರಿಂದಲೆ ದನದ ಯಾವ ಅಂಗವೂ ಉಪಯೋಗಿಸಲ್ಪಡುತ್ತಿರುವುದಿಲ್ಲ. ಮಾದಿಗರು ಇವುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳುತ್ತಿರುವುದಿಲ್ಲ. ಮಾದಿಗರು ಸತ್ತ ದನಗಳ ಮಾಂಸವನ್ನು ತಿನ್ನುತ್ತಾರೆ. ಆದರೆ ಅವನ್ನು ದರದರ ಎಳೆಯುತ್ತ ಒಯ್ದು ಚರ್ಮವನ್ನು ಅನುಪಯುಕ್ತ ಮಾಡಿಬಿಡುತ್ತಾರೆ. ಅಲ್ಲದೆ ಎಲುಬುಗಳನ್ನು ಮುರಿದು ಪುಡಿ ಪುಡಿ ಮಾಡಿಬಿಡುತ್ತಾರೆ.

೨ ಈ ಭಾವನೆಯನ್ನು ಬಿಟ್ಟುಬಿಡುವುದು ಅವಶ್ಯ. ತಮ್ಮ ದನಗಳು

ಜೀವಿಸಿರುವ ವರೆಗೆ ಅವನ್ನು ಸರಿಯಾಗಿ ಸಾಕಿ, ಸತ್ತ ಬಳಿಕ ಮರ್ಯಾದೆಯಿಂದ ಹೊತ್ತುಕೊಂಡು ಹೋಗಿ ಯೋಗ್ಯ ಸ್ಥಳದಲ್ಲಿ ಕೊಯ್ಯಿಸತಕ್ಕದ್ದು. ದನಗಳು ಸತ್ತ ಮೇಲೂ ನಿರುಪಯೋಗಿಯಾಗುವುದಿಲ್ಲವೆಂಬುದನ್ನು ತಿಳಿದುಕೊಂಡು, ಅವು ಜೀವಿಸಿರುವಾಗ ಅವುಗಳೊಡನೆ ದಯೆಯಿಂದ ವರ್ತಿಸುವುದಲ್ಲದೆ, ಅವು ಜೀವಿಸಿದ್ದಾಗ ನಾವು ಅವುಗಳ ಉಪಕಾರವನ್ನು ಹೇಗೆ ಪಡೆಯುತ್ತೇವೋ, ಹಾಗೆಯೆ ಸತ್ತ ಮೇಲೂ ಅವುಗಳನ್ನು ಕೃತಜ್ಞತಾ-ಬುದ್ಧಿಯಿಂದ ಉಪಯೋಗಿಸಿಕೊಂಡರೆ ಅದರಲ್ಲಿ ಯಾವ ದೋಷವೂ ಇಲ್ಲ.

೩ ಸತ್ತ ದನಗಳನ್ನು ಉಪಯೋಗಿಸಿಕೊಳ್ಳದಿದ್ದರೆ ಅವು ಆರ್ಥಿಕ-ದೃಷ್ಟಿಯಿಂದ ತುಟ್ಟಿಯಾಗುವವು. ಹಾಗೆ ತುಟ್ಟಿಯಾದರೆ ಯಾರೂ ಅವುಗಳನ್ನು ಸಾಕುವುದಿಲ್ಲ ಮಾತ್ರವಲ್ಲ, ಗೋಪಾಲನೆಯ ಧರ್ಮವನ್ನೂ ಬಿಟ್ಟುಬಿಡುತ್ತಾರೆ.

೪ ಸತ್ತ ದನಗಳನ್ನು ಎಳೆಯುತ್ತ ಒಯ್ಯುವುದು ಸರಿಯಲ್ಲ. ಎಳೆಯುವಾಗ ಅವುಗಳ ಚರ್ಮವು ಕೆಡುವುದಲ್ಲದೆ ಅದಕ್ಕೆ ಯೋಗ್ಯ ಬೆಲೆಯೂ ಸಿಕ್ಕುವುದಿಲ್ಲ. ಇವುಗಳನ್ನು ಬಂಡಿಯಲ್ಲಾಗಲಿ, ಹೊತ್ತುಕೊಂಡಾಗಲಿ ಒಯ್ಯತಕ್ಕದ್ದು.

೫ ಚರ್ಮವನ್ನು ಸರಿಯಾಗಿ ಸುಲಿದುಕೊಳ್ಳತಕ್ಕದ್ದು. ಮಾಂಸ ಎಲುಬುಗಳ ಗೊಬ್ಬರ ಮಾಡಿಕೊಂಡು ಉಪಯೋಗಿಸತಕ್ಕದ್ದು. ಇವುಗಳ ಕರುಳುಗಳಿಂದ ಕೂಡ ಎಷ್ಟೋ ಉಪಯುಕ್ತ ವಸ್ತುಗಳು ಆಗಬಲ್ಲುವು.

೬ ಈ ಉದ್ಯೋಗಕ್ಕೆ ತಕ್ಕಷ್ಟು ಕ್ಷೇತ್ರವಿದೆ. ಇದನ್ನು ಬೇಕಾದಷ್ಟು ಬೆಳೆಸಬಹುದು. ಆದ್ದರಿಂದ ಕಲಿತವರು ಈ ಉದ್ಯೋಗಕ್ಕೆ ಸಂಬಂಧಪಟ್ಟ ವಿದ್ಯಾರ್ಜನೆಯನ್ನು ಮಾಡುವುದು ಅವಶ್ಯ.

ನವಮ ಖಂಡ

# ಖಾದಿ

---

## ೧ ರಾಟೆಯ ಗುಣಗಳು*

೧ ಪೋಷಕ ಉದ್ಯೋಗವೆನಿಸಿದ ರಾಟೆಯಲ್ಲಿರುವ ಗುಣಗಳು ಮತ್ತಾವ ಉದ್ಯೋಗದಲ್ಲೂ ಇರುವುದಿಲ್ಲ. ಈ ಗುಣಗಳು ಸಂಕ್ಷೇಪವಾಗಿ ಇಂತಿರುವವು:

(ಅ) ಈ ಉದ್ಯೋಗವು ಸುಸಾಧ್ಯವೂ ತತ್ಕಾಲ-ಸಾಧ್ಯವೂ ಇರುತ್ತದೆ. ಏಕೆಂದರೆ:

(೧) ಇದಕ್ಕೆ ದೊಡ್ಡ ಉಪಕರಣಗಳೂ ಸಾಧನಗಳೂ ಬೇಕಾಗುವುದಿಲ್ಲ. ಹತ್ತಿಯು ಮನೆಯದು, ಉಪಕರಣಗಳೂ ಮನೆಯವೇ.

(೨) ಇದಕ್ಕೆ ವಿಶೇಷ ಬುದ್ಧಿಯೂ ಕೌಶಲ್ಯವೂ ಬೇಕಾಗುವುದಿಲ್ಲ. ಶುದ್ಧ ಅಶಿಕ್ಷಿತ ಒಕ್ಕಲಿಗನು ಕೂಡ ಇದನ್ನು ಮಾಡಬಲ್ಲನು.

(೩) ಇದಕ್ಕೆ ಹೆಚ್ಚು ಪರಿಶ್ರಮವೂ ಬೇಡ. ಹೆಂಗುಸರು ನೂಲಬಹುದು; ಚಿಕ್ಕ ಮಕ್ಕಳು, ಮುದುಕರು, ಮತ್ತು ಬೇನೆ-ಬೇಸರಿಕೆಯುವರು ಕೂಡ ನೂಲಬಹುದು. ಮತ್ತು

(೪) ಇದು ಅನೇಕ ಶತಕಗಳ ಅನುಭವದಿಂದ ಸಿದ್ಧವಾದ ಕಸುಬು.

(ಆ) ನೂಲುವವರಿಗೆ ಮನೆಯಲ್ಲಿಯೆ ಉದ್ಯೋಗವು ಸಿಕ್ಕಿದಂತಾಗುವುದು. ಅವರ ನೂಲು ಯಾವಾಗಲೂ ವೆಚ್ಚವಾಗುವುದು. ಬಡವರ ಮನೆಯಲ್ಲಿ ನಾಲ್ಕು ಕಾಸು ಉಳಿಯುವುದು.

(ಇ) ಇದಕ್ಕೆ ಮಳೆಗಾಲವೇ ಬೇಕೆಂದಿಲ್ಲ. ಬೇಸಿಗೆಯಲ್ಲೂ ಇದು ಹಸಿದವರ ಹೊಟ್ಟೆಗೆ ತುತ್ತು ಅನ್ನ ಹಾಕುವುದು.

(ಈ) ಇದಕ್ಕೆ ಧರ್ಮದ ನಿಷೇಧವಿಲ್ಲ; ಮತ್ತು ಇದು ಜನರಿಗೆ ರುಚಿಸದ

---

* ೧೯೨೬ನೇ ಅಕ್ಟೋಬರ್ ೩೧ರ "ನವಜೀವನ"ದಲ್ಲಿ ಪ್ರಕಟವಾದ ಗಾಂಧಿಯವರ ಲೇಖವು ಶ್ರೀಯುತ ಗ್ರೇಗ್‌ರ 'ಖಾದಿಯ ವ್ಯಾಪಕ ಅರ್ಥಶಾಸ್ತ್ರ' ಎಂಬ ಪುಸ್ತಕದಲ್ಲಿ ಉದ್ಧೃತವಾಗಿದೆ. ಅದನ್ನು ಇಲ್ಲಿ ತೆಗೆದುಕೊಂಡಿದೆ.

ಕಸುಬಲ್ಲ.

(ಉ) ಇದು ಜನರಿಗೆ ಮನೆಯಲ್ಲಿ ಕುಳಿತಲ್ಲಿಯೆ ಕೆಲಸ ಕೊಡುವುದು. ಗಿರಣಿಯ ಕೂಲಿಕಾರರಾದರೋ ದುಡಿಯುವುದಕ್ಕಾಗಿ ಮನೆಯನ್ನೂ ಹೊಲವನ್ನೂ ಬಿಟ್ಟು ಗಿರಣಿಗೆ ಹೋಗಬೇಕಾಗುವುದು. ಅದರಿಂದ ಅವರ ಮನೆತನವು ಮುಕ್ಕಾಗುವುದು. ಇದರಲ್ಲಿ ಆ ತರದ ಭಯವಿಲ್ಲ.

(ಊ) ಹಿಂದೂಸ್ತಾನದ ಗ್ರಾಮ-ಪಂಚಾಯತಿಗಳು ಇಂದು ಮರಣೋನ್ಮುಖವಾಗಿರುವವು. ಇದು ಅವುಗಳ ಪುನರುಜ್ಜೀವನವನ್ನು ಮಾಡಬಲ್ಲುದು.

(ಎ) ಒಕ್ಕಲಿಗನಿಗೆ ಇದನ್ನು ಬಿಟ್ಟರೆ ಹೇಗೆ ಬೇರೆ ಗತಿ ಇಲ್ಲವೊ, ಹಾಗೆಯೇ ನೇಕಾರನಿಗೂ ಇದರ ಹೊರತು ಕಾರ್ಯ ಸಾಗುವುದಿಲ್ಲ. ಇಂದು ಹಿಂದುಸ್ತಾನದಲ್ಲಿ ಬಳಸುವ ಬಟ್ಟೆಯ ೩ದಷ್ಟು ಬಟ್ಟೆಯನ್ನು ನೇಕಾರರು ನೇಯುವರು. ರಾಟೆ ನಿರ್ನಾಮವಾದರೆ ಅವರು ಒಂದಲ್ಲ ಒಂದು ದಿನ ನಿರ್ಗತಿಕರಾಗಬಹುದು.

(ಏ) ಇದರ ಪುನರುದ್ಧಾರದಿಂದ ಸಾವಿರಾರು ಉದ್ಯೋಗಗಳ ಉದ್ಧಾರವಾಗುವುದು. ಬಡಿಗರು, ಕಮ್ಮಾರರು, ಪಿಂಜಾರರು, ಬಣ್ಣಗಾರರು, ಮುಂತಾದವರಲ್ಲಿ ಪುನಃ ಜೀವಕಳೆ ಬರುವುದು.

(ಐ) ಇದೊಂದರಿಂದಲೆ ಧನದ ಅಸಮಾನ ವಿಭಜನೆಯು ಅಳಿದು ಸಮಾನತೆಯು ಬರಬಹುದು.

(ಒ) ಇದರಿಂದಲೆ ಉದ್ಯೋಗಗೇಡಿತನವು ದೂರವಾಗುವುದು. ಒಕ್ಕಲಿಗನಿಗೆ ಬಿಡುವಿನ ಸಮಯದಲ್ಲಿ ಮಾತ್ರವೇ ಅಲ್ಲ, ಇಂದು ಕೆಲಸವಿಲ್ಲದೆ ಗುಂಪು ಗುಂಪಾಗಿ ಅಲೆದಾಡುವ ಶಿಕ್ಷಿತ ಜನರಿಗೂ ಕೆಲಸ ದೊರೆಯುವುದು. ಈ ಕೈಗಾರಿಕೆಯ ಪುನರುದ್ಧಾರದ ಕಾರ್ಯವು ಅಷ್ಟಿಷ್ಟು ದೊಡ್ಡದಲ್ಲ. ಇದರಲ್ಲಿ ಸಾವಿರಾರು ಸುಶಿಕ್ಷಿತ ಜನರು ತೊಡಗಿದರೂ ಕಡಮೆಯೇ.

೨ ಇನ್ನು, ರಾಟೆಗಳು ಪುನಃ ಪ್ರಚಾರಗೊಂಡಲ್ಲೆಲ್ಲ ಅವು ಅನೇಕರಿಗೆ ಅನೇಕ ತರದ ಲಾಭಗಳನ್ನು ಮಾಡಿಕೊಟ್ಟಿವೆ. ಈ ಲಾಭಗಳು ಕೂಡ ರಾಟೆಯ ಗುಣಗಳೇ. ಆ ಲಾಭಗಳು ಇಂತಿರುವವು:*

---

*ಈ ಸೂತ್ರದೊಳಗಿನ ಭಾಗವು ಕೂಡ, ೧೯೨೬ನೇ ನವಂಬರ್ ೭ರ 'ನವಜೀವನ' ದಲ್ಲಿ ಪ್ರಕಟವಾದ ಲೇಖ-ಮಾಲೆಯಿಂದ ಶ್ರೀ. ಗ್ರೇಗರು ತಮ್ಮ ಪುಸ್ತಕದಲ್ಲಿ ಎತ್ತಿದ್ದು. ಅದನ್ನು ಇಲ್ಲಿ ಮತ್ತೆ ಉದ್ಧರಿಸಿದೆ.

(ಅ) 'ರಾಟೆಗಳು ಎಷ್ಟೋ ಜನರ ಜೀವನ-ಪರಿವರ್ತನೆಯನ್ನೂ ಹೃದಯ ಪರಿವರ್ತನೆಯನ್ನೂ ಮಾಡಿವೆ.'

(ಆ) 'ರಾಟೆಗಳಿಂದಲೆ ಹೆಂಡದ ಚಟವು ಕಡಮೆಯಾಗಲಾರಂಭಿಸಿ ಒಕ್ಕಲಿಗರು ಸಾಲದಿಂದ ಮುಕ್ತರಾಗುತ್ತಿದ್ದಾರೆ.'

(ಇ) ಬರಗಾಲದಲ್ಲಿ ಸಂಕಟಗಳ ನಿವಾರಣೆ ಮಾಡುವ ಕಾರ್ಯದಲ್ಲಿ ಇದು ಹೆಸರು-ವಾಸಿಯಾಗಿದೆ.

## ೨ ರಾಟೆಯನ್ನು ಕುರಿತ ತಪ್ಪು-ವಿಚಾರಗಳು

೧ 'ರಾಟೆಯನ್ನು ಕುರಿತು ಅನೇಕರು ಅನೇಕ ತರದ ಟೀಕೆಗಳನ್ನು ಮಾಡುತ್ತಾರೆ. ಈ ಟೀಕೆಗೆ ರಾಟೆಯನ್ನು ಕುರಿತ ಅವರ ತಪ್ಪು-ವಿಚಾರಗಳೆ ಕಾರಣ.' ಕೆಳಗಿನ ಉತ್ತರಗಳಿಂದ ಆ ತಪ್ಪು-ವಿಚಾರಗಳು ಯಾವುವು ಎನ್ನುವುದು ತಿಳಿದುಬರುವುದು.

೨ 'ರಾಟೆಯು ಗಿರಣಿಯೊಡನೆ ಮೇಲಾಟ ಮಾಡುವ ಉದ್ಯೋಗವಲ್ಲ. ಗಿರಣಿಯ ಸ್ಥಾನವನ್ನು ರಾಟೆಯು ಪಡೆಯುತಕ್ಕದ್ದೆಂಬ ವಿಚಾರವೇ ಇರುವುದಿಲ್ಲ. ಅದಕ್ಕೆ ಬದಲಾಗಿ ಗಿರಣಿಗಳೇ ರಾಟೆಯ ಪ್ರತಿ-ಸ್ಪರ್ಧಿಗಳು. ಆ ಮಟ್ಟಿಗೆ ಅವುಗಳ ನಿಯಂತ್ರಣವು ಅವಶ್ಯ.'

೩ ರಾಟೆಯು ಯಾವುದಾದರೊಂದು ಮುಖ್ಯ ಉದ್ಯೋಗದ ಸ್ಥಾನದಲ್ಲಿ ವಿರಾಜಮಾನವಾಗಬೇಕೆಂದು ಬಯಸುವುದಿಲ್ಲ. 'ತನ್ನ ಪೂರ್ಣ ಶಕ್ತಿಯನ್ನೂ ಸಂಪೂರ್ಣ ಸಮಯವನ್ನೂ ಉಪಯೋಗಿಸಲು ತಕ್ಕಷ್ಟು ಕಾರ್ಯವು ಇರುವ ಸಶಕ್ತ ಮನುಷ್ಯನು ತನ್ನ ಆ ಕೆಲಸವನ್ನು ಮಾಡಬಾರದೆಂದು ರಾಟೆಯು ಹೇಳುವುದಿಲ್ಲ.' ಆದ್ದರಿಂದ ಈ ಕೈಗಾರಿಕೆಯಿಂದ ಬಂದ ಗಳಿಕೆಯನ್ನು ಉಳಿದ ಕೈಗಾರಿಕೆಗಳಿಂದ ಬಂದ ಗಳಿಕೆಯೊಡನೆ ಹೋಲಿಸಿದರೆ ದೊಡ್ಡ ತಪ್ಪಾಗುವುದು.

೪ 'ರಾಟೆಯಿಂದ ಹೊಟ್ಟೆ ತುಂಬಿಕೊಳ್ಳಿರಿ..... ಬೇರೆ ಉದ್ಯೋಗಗಳನ್ನು ಬಿಟ್ಟು ರಾಟೆಯನ್ನು ತಿರುಗಿಸಿರಿ ಎಂದು ಯಾರೂ ಹೇಳುವುದಿಲ್ಲ.'

೫ 'ರಾಟೆಯಿಂದ ದೇಶದ ಧನವು ತಪ್ಪದೆ ವೃದ್ಧಿಹೊಂದುವುದು. ಪೂರ್ಣ ಕೂಲಿ ಕೊಟ್ಟರೆ ಅದರಿಂದ ಹೊಟ್ಟೆಯೂ ತುಂಬಬಹುದು. ಆದರೆ ಯಾರಾದರೂ ರಾಟೆಯಿಂದ ಸಿರಿವಂತರಾಗಲು ಆಶೆಪಟ್ಟರೆ ಅವರು ನಿರಾಶರಾಗುವರು.

ಇದು ರಾಟಿಯ ಗುಣವೇ ಹೊರತು ದೋಷವಲ್ಲ. ಆ ಮಟ್ಟಿಗೆ ಅದು ಆರ್ಥಿಕ ಸಮಾನತೆಯ ಸಾಧನವಾಗುವುದು.'

೬ 'ಹಿಂದೂಸ್ತಾನದ ಒಕ್ಕಲಿಗರ ಆರು ತಿಂಗಳು ವ್ಯರ್ಥವಾಗಿ ಹಾಳಾಗುವುವು. ಇದರಿಂದ ಅವರ ಎದುರು, ನಿರುದ್ಯೋಗದ ಮತ್ತು ಬಡತನದ ದೊಡ್ಡ ಪ್ರಶ್ನೆಯು ನಿಲ್ಲುವುದು. ಈ ಪ್ರಶ್ನೆಯನ್ನು ರಾಟಿಯು ಅಲ್ಲಿಂದಲೇ ಬಗೆಹರಿಸಬಲ್ಲುದು. ಆದುದರಿಂದ ವ್ಯಾವಹಾರಿಕ ಹಾಗೂ ಕೊನೆಯ ವರೆಗೆ ಬಾಳುವಂಥ ಉಪಾಯವು ಇದೇ ಎಂದು ರಾಟಿಯ ಪುರಸ್ಕರ್ತರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾರೆ.'

೭ 'ರಾಟಿಯಿಂದ ಬಂದ ಹುಟ್ಟುವಳಿ ಒಂದು ಒಡಕು ಕವಡೆಯಷ್ಟೇ ಇರಬಹುದು. ಆದರೂ ಒಕ್ಕಲಿಗರ ವರ್ಷದಲ್ಲಿ ಅರ್ಧದಷ್ಟು ವೇಳೆಯು ವ್ಯರ್ಥವಾಗಿ ಹೋಗುವುದು. ಆ ಕಾಲದಲ್ಲಿ ಅವರಿಗೆ ಒಡಕು ಕವಡೆಯಷ್ಟೂ ಉತ್ಪನ್ನವಾಗುವುದಿಲ್ಲ. ಅಲ್ಲದೆ, ಅವರಿಗೆ ನಿರುದ್ಯೋಗದ ರೋಗವೂ ಅಂಟಿಕೊಳ್ಳುವುದು. ಇಂತಹ ಪರಿಸ್ಥಿತಿ ಇದ್ದಿರದಿದ್ದರೆ ಹಿಂದುಸ್ತಾನದ ಅರ್ಥಶಾಸ್ತ್ರದಲ್ಲಿ ರಾಟಿಗೆ ಸ್ಥಾನವೆ ಇರುತ್ತಿರಲಿಲ್ಲ.'

೮ ರಾಟಿಯಿಂದ ಅತ್ಯಲ್ಪವಾದರೂ ಗಳಿಸಬಹುದೆಂದು ಮೇಲೆ ಹೇಳಿದೆ. ನಾವು ಹಾಗೆ ಹೇಳಿದ್ದು ಆತ್ಮ-ಸಂತೋಷಕ್ಕಾಗಿ ಅಲ್ಲ, ರಾಟಿಯು ಎಷ್ಟು ಉಪಯುಕ್ತವೆಂಬುದನ್ನು ತೋರಿಸುವುದಕ್ಕಾಗಿ. ವಾಸ್ತವಿಕವಾಗಿ ರಾಟಿಯಿಂದಲೆ ಆಗಲಿ, ಮತ್ತಾವ ಕೆಲಸದಿಂದಲೆ ಆಗಲಿ, ಅತ್ಯಲ್ಪವೆ ಉತ್ಪನ್ನ ದೊರೆಯುವ ಸ್ಥಿತಿ ಸಂತೋಷಜನಕವಲ್ಲ. ಈ ವಿಷಯವಾಗಿ 'ಸ್ವಾವಲಂಬಿಯಾದ ಮತ್ತು ಕೂಲಿಯ ಖಾದಿ' ಎಂಬ ಪ್ರಕರಣದಲ್ಲಿ ಹೆಚ್ಚು ವಿಚಾರಗಳನ್ನು ಮಂಡಿಸಲಾಗಿದೆ.

## ೩ ಖಾದಿ ಮತ್ತು ಗಿರಣಿ-ಬಟ್ಟೆ

೧ ಖಾದಿಗೂ ಗಿರಣಿ-ಬಟ್ಟೆಗೂ ಮೇಲಾಟವಾಗಗೊಡತಕ್ಕದ್ದಲ್ಲ. ಈ ಮೇಲಾಟವು ಒಳಿತಾದುದೂ ಅಲ್ಲ.

೨ ರಾಟಿಯು ಕೋಟಿಗಟ್ಟಲೆ ಜನರ ಗೃಹೋದ್ಯೋಗ, ಜೀವನದ ಆಧಾರ. ಈ ಗೃಹೋದ್ಯೋಗವು ನಾಶವಾಗುವಂತೆ ಗಿರಣಿಗಳ ಉದ್ಯೋಗ ನಡೆದರೆ, ಅಥವಾ ನಡೆಯಗೊಟ್ಟರೆ, ಅದನ್ನು ನಡೆಸುವವನೂ ನಡೆಯಗೊಡು

ವವನೂ ಜನರ ಕ್ಷೇಮ-ಚಿಂತನೆ ಮಾಡುವುದಿಲ್ಲವೆನ್ನಬಹುದು.

೩. ಆದ್ದರಿಂದ, ಗಿರಣಿಗಳು ಒಂದು ವೇಳೆ ಇದ್ದರೂ ಅವು ರಾಟಿಯ ಕಾರ್ಯಕ್ಕೆ ಅಡ್ಡಿ ಮಾಡಕೂಡದು. ಕೋಟಿಗಟ್ಟಲೆ ಜನರು ಯಾವ ಬಗೆಯ ನೂಲನ್ನು ನೂಲುವರೊ, ಮತ್ತು ಯಾವ ಬಗೆಯ ಬಟ್ಟೆಯನ್ನು ನೇಯುವರೊ, ಅದನ್ನು ಗಿರಣಿಗಳು ಮಾಡಕೂಡದೆಂದು ಅಪ್ಪಣೆ ಇರತಕ್ಕದ್ದು.

೪ ವ್ಯಕ್ತಿಯ ಪ್ರಶ್ನೆಯನ್ನು ಬಿಟ್ಟು ರಾಷ್ಟ್ರೀಯ ಅರ್ಥಶಾಸ್ತ್ರದ ದೃಷ್ಟಿಯಿಂದ ಯೋಚಿಸಿದರೆ, ಯಾವುದಾದರೂ ವಸ್ತುವಿನ ಮೂಲ ಬೆಲೆಯನ್ನು ಕಂಡುಹಿಡಿಯುವಾಗ ಅದಕ್ಕಾಗಿ ಉಪಯೋಗಿಸಿದ ಪದಾರ್ಥ, ಭಂಡವಲು, ಕೂಲಿ, ಮತ್ತು ಅದನ್ನು ಮಾಡುವವನಿಗೆ ತಗಲಿದ ವೆಚ್ಚದ ವಿಚಾರವನ್ನು ಮಾತ್ರವೇ ಮಾಡತಕ್ಕದ್ದಲ್ಲ. ಆದರೆ ಈ ರೀತಿ ಆ ವಸ್ತುಗಳನ್ನು ಹುಟ್ಟಿಸುವುದರಿಂದ ನಿರುದ್ಯೋಗಿಗಳ ಸಂಖ್ಯೆಯು ಬೆಳೆಯುತ್ತಿದ್ದರೆ ಆ ನಿರುದ್ಯೋಗಿಗಳನ್ನು ಕಾಪಾಡುವ ವೆಚ್ಚವೂ ಪ್ರಜೆಗಳ ಮೇಲೆಯೆ ಬೀಳುವುದು, ಎಂದರೆ ಈ ವೆಚ್ಚವು ಆ ವಸ್ತುಗಳ ಮೇಲೆಯೇ ಬೀಳಬೇಕು ಎಂಬುದನ್ನು ತಿಳಿಯತಕ್ಕದ್ದು. ಈ ದೃಷ್ಟಿಯಿಂದ ನೋಡಿದರೆ ಖಾದಿಗಿಂತಲೂ ಗಿರಣಿ-ಬಟ್ಟೆಯೆ ತುಟ್ಟಿಯಾಗುವುದೆಂಬುದು ಗೊತ್ತಾಗುವುದು.*

---

* ಹೆಚ್ಚು ವಿವರಗಳಿಗಾಗಿ ಶ್ರೀ. ಗ್ರೇಗರ ಪುಸ್ತಕದಿಂದ ಎತ್ತಿದ ಈ ಅಂಕೆಗಳು ಹೆಚ್ಚು ಉಪಯುಕ್ತವಾಗಿವೆ. ಒಬ್ಬನು ಒಂದು ಗಂಟೆಯಲ್ಲಿ ಕೈಯಿಂದ ಎಷ್ಟು ನೇಯಬಲ್ಲನೋ, ಅದಕ್ಕಿಂತಲೂ ೨೦೩ರಿಂದ ೨೪೬ ಪಟ್ಟು ಹೆಚ್ಚಾಗಿ ಗಿರಣಿಯಲ್ಲಿ ನೂಲಬಲ್ಲನು; ಕೈಯಿಂದ ಎಷ್ಟು ನೂಲಬಲ್ಲನೋ ಅದಕ್ಕಿಂತಲೂ ೨೦ ಪಟ್ಟು ಹೆಚ್ಚಾಗಿ ಗಿರಣಿಯಲ್ಲಿ ನೇಯಬಲ್ಲನು. (ಇದು ೧೯೨೬ರ ಲೆಕ್ಕ.) ಇಬ್ಬರೂ ಸಮವಾಗಿ ಕೆಲಸ ಮಾಡಿದರೆ ಗಿರಣಿಯಲ್ಲಿ ನೂಲುವವನು ೨೦೦ಕ್ಕಿಂತ ಹೆಚ್ಚು ಜನ ಕೈಯಿಂದ ನೂಲುವವರನ್ನೂ, ಗಿರಣಿಯ ನೇಕಾರನು ೨೦ಕ್ಕಿಂತ ಹೆಚ್ಚು ಜನ ಕೈಯಿಂದ ನೇಯುವವರನ್ನೂ ಕೆಲಸಗೇಡಿಗಳನ್ನಾಗಿ ಮಾಡುತ್ತಾನೆ. ಇಂಥ ನಿರುದ್ಯೋಗಿಗಳ ಮುಕ್ಕಾಲು ಪಾಲು ಕಾಲವು ಅನ್ಯ ಉದ್ಯೋಗಗಳಲ್ಲಿ ಕಳೆದುಹೋಗುತ್ತದೆಂಬ ತಿಳಿವಳಿಕೆಯಿಂದ ಹೆಚ್ಚು ಸಡಿಲುಮಾಡಿ ಲೆಕ್ಕಹಾಕಿದರೂ ೨೬೭೧ ಲಕ್ಷ ಜನರಿಗೆ, ದಿನಕ್ಕೆ ಪ್ರತಿ ಒಬ್ಬನಿಗೂ ೩ ಆಣೆಗಳಷ್ಟು ಹಾನಿಯಾಗುತ್ತದೆ. ಈ ನಿರುದ್ಯೋಗಿಗಳನ್ನು ಸಲಹುವ ವೆಚ್ಚವನ್ನು ಪರದೇಶಿ ಮತ್ತು ಸ್ವದೇಶೀ ಗಿರಣಿಗಳ ಬಟ್ಟೆಯ ಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦-೧-೯ಯಷ್ಟು, ಬರಿಯ ಪರದೇಶೀ ಗಿರಣಿಗಳ ಬಟ್ಟೆಯ ಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦-೫-೨ಯಷ್ಟು ಬೆಲೆಯು ಹೆಚ್ಚಾಗುವುದು. ೧೯೨೬ರಲ್ಲಿ ಮಾಡಿದ ಲೆಕ್ಕದ ಪ್ರಕಾರ ಖಾದಿ ಮತ್ತು ಗಿರಣಿ-ಬಟ್ಟೆಯ

೫ ಹೀಗೆ, ಪ್ರಜೆಗಳ ಹಿತಚಿಂತನೆಯನ್ನು ಬಯಸುವ ಸರಕಾರವಿದ್ದರೆ, ನಿರುದ್ಯೋಗದ ನಿರ್ಮೂಲನವನ್ನು ಮಾಡಿದ ಹೊರತು ಖಾದಿಯೊಡನೆ ಗಿರಣಿ ಮೇಲಾಟ ನಡೆಸಲು ಎಂದೂ ಅನುವುಗೊಡಲಿಕ್ಕಿಲ್ಲ.

೬ ಇಂಥ ಸರಕಾರವು ಇಲ್ಲದ್ದರಿಂದ ಜನರು ಬಡವರ ಮೇಲಿನ ಕನಿಕರ ದಿಂದಾದರೂ ಗಿರಣಿಯ ಇಂಥ ಉದ್ಯೋಗವನ್ನು ನಿಲ್ಲಿಸತಕ್ಕದ್ದು.

೭ ಗಿರಣಿಯು ಮಾಡುವ ಹಾನಿಕರವಾದ ಈ ಮೇಲಾಟವನ್ನು ನಿಲ್ಲಿಸು ವುದಕ್ಕಾಗಿ ಖಾದಿಯ ಕ್ಷೇತ್ರದಲ್ಲಿ ಕೈಹಾಕುವ ದೇಶೀ ಪರದೇಶೀ ಗಿರಣಿಗಳ ಬಹಿಷ್ಕಾರ, ಖಾದಿಯನ್ನೇ ಧರಿಸುವ ಪ್ರತಿಜ್ಞೆ, ಖಾದಿಯ ಬಗ್ಗೆ ದಾನ, ಯಜ್ಞ-ಕರ್ಮವೆಂದು ತಿಳಿದು ನೂಲುವುದು, ಮುಂತಾದುವು ಅಹಿಂಸಾತ್ಮಕ ಮಾರ್ಗಗಳು.

## ೪ ರಾಟೆಯೂ ಕೈಮಗ್ಗವೂ

೧ ಕೈನೂಲಿನ ಬದಲು ಕೇವಲ ಕೈನೇಯ್ಗೆಗೆ ಮಾತ್ರ ಉತ್ತೇಜನವನ್ನು ಕೊಡತಕ್ಕದ್ದು, ಗಿರಣಿಯ ನೂಲನ್ನು ಬಹಿಷ್ಕರಿಸದೆ ಗಿರಣಿಯ ನೇಯ್ಗೆಯನ್ನು ಮಾತ್ರ ಬಹಿಷ್ಕರಿಸತಕ್ಕದ್ದು ಎನ್ನುವ ವಿಚಾರ, ರಾಟೆಯ ವಿಷಯದಲ್ಲಿದ್ದ ತಪ್ಪು ತಿಳಿವಳಿಕೆಯಿಂದ ಹುಟ್ಟಿದೆ. ಏಕೆಂದರೆ:

೨ 'ನೂಲುವ ಕಸುಬು ಹೇಗೆ ಸಾರ್ವತ್ರಿಕವಾಗಬಲ್ಲುದೋ ಹಾಗೆ ಕೈ-ನೇಯ್ಗೆಯ ಕಸುಬು ಸಾರ್ವತ್ರಿಕವಾಗಲಾರದು.*

---

ನಡುವೆ ಗಜಕ್ಕೆ ೦-೨-೦ಯ ಅಂತರವಿತ್ತು. ಇಂದು ಇದಕ್ಕೂ ಕಡಮೆ ಆಗಿದೆ. ಪ್ರಜಾ ತಂತ್ರ ಸರಕಾರವೇ, ಈ ನಿರುದ್ಯೋಗಿಗಳ ನಿರ್ವಾಹದ ವೆಚ್ಚವನ್ನು ಬಟ್ಟೆಯ ಗಿರಣಿ ಗಳಿಂದ ತೆರಿಗೆಯ ರೂಪದಿಂದ ವಸೂಲು ಮಾಡಬೇಕಾದೀತು. ಆಗ, ಗಿರಣಿ-ಬಟ್ಟೆಯು ಅಗ್ಗವಾಗುವುದಿಲ್ಲವೆಂಬುದು ಗೊತ್ತಾದೀತು. ಆದರೆ ಈಗಲಾದರೋ ಈ ವೆಚ್ಚವನ್ನು ಪ್ರಜೆಗಳು ಪರೋಕ್ಷವಾಗಿ ಕೊಡುತ್ತಿದ್ದಾರೆ. ಆದರೆ ಇದು ಪೇಟೆಯ ದರದಲ್ಲಿ ಮಾತ್ರ ಕಂಡುಬರುವುದಿಲ್ಲ. ಇದರ ಬಗೆಗೆ ಹೆಚ್ಚು ವಿಷಯವನ್ನು ಶ್ರೀ. ಗ್ರೇಗರ ಪುಸ್ತಕದಿಂದ ತಿಳಿದುಕೊಳ್ಳಬಹುದು. —ಕಿ. ಘ. ಮಶ್ರುವಾಲಾ

*'ಹಿಂದುಸ್ಥಾನಕ್ಕೆ ಪ್ರತಿ ವರ್ಷ ೪೬೬ ಕೋಟಿ ಗಜ ಬಟ್ಟೆಯು ಬೇಕಾಗುತ್ತದೆ. ಇಷ್ಟೆಲ್ಲ ವನ್ನೂ ಕೈಮಗ್ಗದಲ್ಲಿಯೇ ನೇಯಿಸಿದರೂ, ಪರಮಾವಧಿ ಎಂದರೆ ದಿನಾಲು ಎರಡು ಗಂಟೆ ಕೆಲಸ ಮಾಡುವ ೯೦ ಲಕ್ಷ ನೇಕಾರರನ್ನು ಈ ಕಾರ್ಯದಲ್ಲಿ ತೊಡಗಿಸಬಹುದು.

೩ ನೂಲುವುದೇನೋ ಪೋಷಕ ಉದ್ಯೋಗವಾಗಬಲ್ಲುದು. ಆದರೆ ನೇಯ್ಗೆ ಮಾತ್ರ ಸ್ವತಂತ್ರ ಉದ್ಯೋಗವೇ. ಈ ವಿಚಾರವು ಈ ಸೂಚನೆ ಮಾಡುವವರ ಗಮನಕ್ಕೆ ಬಂದಿಲ್ಲ.

೪ ಒಂದು ವೇಳೆ ಕ್ಯಾದೆಯಿಂದಾದರೂ ಗಿರಣಿಯ ನೇಯ್ಗೆಯು ನಿಲ್ಲಿಸಲ್ಪಡದಿದ್ದರೆ ಜನರು ತಮ್ಮ ಪ್ರಯತ್ನದಿಂದಲೆ ಅದನ್ನು ಬಹಿಷ್ಕರಿಸಬೇಕಾಗುವುದು. ಮತ್ತು ನೇಕಾರರು ಗಿರಣಿಗಳ ಯಜಮಾನರ ದಯೆಯಿಂದಲೆ ಉಪ-ಜೀವಿಸಬೇಕಾಗುವುದು. 'ಏಕೆಂದರೆ ಗಿರಣಿಗಳು ಕೈನೇಯ್ಗೆಯೊಡನೆ ಮೇಲಾಟ ಮಾಡುತ್ತಿವೆ ...(ಮತ್ತು) ದಿನ ದಿನಕ್ಕೂ ಗಿರಣಿಗಳೆ ಹೆಚ್ಚು ಹೆಚ್ಚಾಗಿ ನೇಯ್ಗೆ ಕಾರ್ಯವನ್ನು ಮಾಡುತ್ತ ಸಾಗಿವೆ ... ಈ ಮೇಲಾಟವು ಹೆಚ್ಚು ವಿಷಮವೂ ಘಾತಕವೂ ಆಗುತ್ತ ಹೋಗುವುದು.'

೫ ಇದಕ್ಕೆ ವಿಪರೀತವಾಗಿ 'ಕೈಮಗ್ಗ ಮತ್ತು ರಾಟಿ, ಇವೆರಡೂ ಅವಳಿ ಜವಳಿ ಸಹೋದರ-ಸಹೋದರಿಯರಂತಿವೆ. ಇವುಗಳಲ್ಲಿ ಒಂದು ಇನ್ನೊಂದನ್ನು ಬಿಟ್ಟು ಬದುಕಿರಲಾರದು.'

೬ 'ಪ್ರತಿಯೊಂದು ಮನೆಯಲ್ಲೂ ಒಂದು ರಾಟಿ ಇರತಕ್ಕದ್ದು. ಪ್ರತಿಯೊಂದು ಚಿಕ್ಕ ವಸತಿಯ ಗ್ರಾಮದಲ್ಲೂ ಒಂದು ಕೈಮಗ್ಗವಿರತಕ್ಕದ್ದು. ಇವು ಭಾವೀ ಯುಗದ ಘಟನೆಯ ಮಂತ್ರಗಳು.'

## ೫ ಖಾದೀ ಉತ್ಪತ್ತಿಯ ಕ್ರಿಯೆಗಳು

೧ ಹಿಂಜುವುದು ಮೊದಲುಗೊಂಡು ನೇಯ್ಗೆಯ ವರೆಗಿನ ಖಾದಿಯ ಹುಟ್ಟುವಳಿಯ ಎಲ್ಲ ಕಾರ್ಯಗಳು ಮನೆಯಲ್ಲೇ ಆಗತಕ್ಕದ್ದು. ಇವುಗಳಲ್ಲಿ ಒಂದೇ ಒಂದು ಕ್ರಿಯೆ ಕಾರ್‌ಖಾನೆಯನ್ನು ಅವಲಂಬಿಸಿದರೂ ಅದು ಒಂದಿಲ್ಲೊಂದು ದಿನ ಖಾದಿಯ ಉದ್ದೇಶವನ್ನು ಕುತ್ತಿಗೇಡುಮಾಡುವುದು.

---

ಇಷ್ಟು ನೇಕಾರರಿಗಿಂತ ಇಷ್ಟು ಕುಟುಂಬಗಳನ್ನು ತೊಡಗಿಸುವುದು ಒಳಿತೆಂದು ಒಪ್ಪಿದರೆ ದಿನದ ಎರಡಾಣೆಗಳು ಅಷ್ಟು ಜನರಲ್ಲಿ ಹಂಚಿಹೋಗುವುವು. ಇದರಿಂದ ಪ್ರತಿಯೊಬ್ಬನ ಗಳಿಕೆಯು ಪ್ರಮಾಣತಃ ನೋಡಿದರೆ ಕಡಮೆಯಾಗುವುದು.'(೧೯೩೬ನೇ ವರ್ಷದ ನವಂಬರ್ ೧೪ರ 'ನವಜೀವನ'ದ ಆಧಾರದಿಂದಲೆ ಈ ಪ್ರಕರಣದ ಸೂತ್ರಗಳು ಬರೆಯಲ್ಪಟ್ಟವೆ. ಶ್ರೀ. ಗ್ರೇಗರ ಪುಸ್ತಕದಲ್ಲಿ ಈ ಲೇಖವು ಸಂಪೂರ್ಣವಾಗಿ ಕೊಡಲ್ಪಟ್ಟದೆ)—ಮಶ್ರುವಾಲಾ.

೨ ಆದ್ದರಿಂದ ನೂಲುವ ರಾಟೆಯು ಜೊತೆಯಲ್ಲಿ ಅರೆಯುವ ರಾಟೆ, ಹಿಂಜುವ ಬಿಲ್ಲು, ಇರಬೇಕಾದುವೇ ಎಂದು ತಿಳಿಯತಕ್ಕದ್ದು.

೩ ಹತ್ತಿ ಅರೆಯುವ ರಾಟೆ, ಹಿಂಜುವ ಬಿಲ್ಲು, ಮತ್ತು ನೂಲುವ ರಾಟೆಯಲ್ಲಿ ಸುಧಾರಣೆ ಅವಶ್ಯವೆನಿಸಿದರೆ ಅವು ಗೃಹೋದ್ಯೋಗಗಳಾಗಿ ಉಳಿಯುವಂತೆಯೆ ಸುಧಾರಣೆ ಮಾಡತಕ್ಕದ್ದು.

೪ ಖಾದಿಯನ್ನು ಸುಧಾರಿಸಬೇಕಾದರೆ ಹತ್ತಿಯ ಸಂಗ್ರಹದಿಂದ ಮೊದಲುಗೊಂಡು ನೇಯ್ಗೆ ವರೆಗಿನ ಎಲ್ಲ ಕ್ರಿಯೆಗಳ, ಮತ್ತು ಎಲ್ಲ ಯಂತ್ರಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ಮಾಡತಕ್ಕದ್ದು. ಅವುಗಳ ಸುಧಾರಣೆಗೆ ಆ ಮೇಲೆ ಕೈ-ಹಾಕುವುದು ಒಳಿತು.

೫ ಹತ್ತಿಯ ಹೊಲವಿದ್ದವರು ತಮ್ಮ ಹೊಲದ ಹತ್ತಿಯನ್ನೇ ಉಪಯೋಗಿಸುವುದು ತಮ್ಮ ಮೊದಲನೆ ಕೆಲಸ ಹೀಗೆ ಮಾಡುವ ಒಕ್ಕಲಿಗನು ಒಳ್ಳೆಯ ಹತ್ತಿ-ಕಾಳುಗಳನ್ನು ದೊರಕಿಸಲು ಯತ್ನಿಸಬಲ್ಲ; ಕಸುರು ಬರದಂತೆ ಹತ್ತಿಯನ್ನು ಬಿಡಿಸಿಕೊಳ್ಳಬಲ್ಲ. ತನ್ನ ಈ ಕೆಲಸವನ್ನು ಒಕ್ಕಲಿಗನು ತಾನೇ ಮಾಡುತ್ತ ಹೋಗಬಲ್ಲ. ಆದರೆ ಅವನಿಗೆ ಅದರ ಮಹತ್ವವನ್ನು ತಿಳಿಸಿ ಸರಿಯಾದ ಮಾರ್ಗವನ್ನು ತೋರಿಸಿ ಆಗಾಗ ಸಲಹೆ ಕೊಡುವುದು ಅಗತ್ಯ.

೬ ರಾಟೆಯಿಂದ ಹತ್ತಿ ಅರೆದರೆ ಕಾಳುಗಳಿಗೆ ಪೆಟ್ಟು ತಗಲುವುದಿಲ್ಲ, ಎಳೆಯ ಕಸುವೂ ಕಡಮೆಯಾಗುವುದಿಲ್ಲ. ಆಗ ಮಾತ್ರವೇ ಕಾಳು ತೆಗೆದ ಹತ್ತಿ ನೂಲಲಿಕ್ಕೆ ಬಹು ಒಳ್ಳೆಯದು. ಆ ಹತ್ತಿಯಿಂದ ನೂಲಲು ಶ್ರಮವಾಗುವುದಿಲ್ಲ.

೭ ಉತ್ತಮ ನೂಲು ಹೊರಡಬೇಕಾದರೆ ಹಂಜಿ ಉತ್ತಮವಿರಬೇಕು. ಸರಿಯಾಗಿ ನೂಲಲು ಬರುವವರಿಗೆ ಒಳ್ಳೆಯ ಮತ್ತು ಕೆಟ್ಟ ಹಂಜಿಯೊಳಗಿನ ಭೇದವು ಗೊತ್ತಾಗುವುದು. ಹಿಂಜುವುದನ್ನರಿತವರಿಗೆ ಅದರಲ್ಲಿನ ಕ್ರಿಯೆಯ ಭೇದಗಳು ತಿಳಿಯುವವು. ಆದ್ದರಿಂದ ಹಿಂಜುವುದನ್ನು ಸರಿಯಾಗಿ ಬಲ್ಲವರು ಎರಡನೆಯವರ ಹಂಜಿಯನ್ನು ಉಪಯೋಗಿಸಲು ಹಿಂಜರಿಯುವರು.

೮ ಕೆಟ್ಟ ಹಂಜಿಯಿಂದ ಕಡಮೆ ತರಗತಿಯ ನೂಲು ಹೊರಡುತ್ತದೆ; ಎಳೆಗಳು ಆಗಾಗ್ಗೆ ಹರಿಯುತ್ತವೆ. ಇದರಿಂದ ಬಹಳ ಆರ್ಥಿಕ ಹಾನಿಯಾಗುವುದು.

೯ ಯಾವ ಹತ್ತಿಯಿಂದ ಎಷ್ಟು ಜಿನುಗು ಎಷ್ಟು ದಪ್ಪ ನೂಲು ಹೊರಡಬಹುದೊ ಅದಕ್ಕಿಂತ ಹೆಚ್ಚು ದಪ್ಪ ಹೆಚ್ಚು ಜಿನುಗು ನೂಲುವುದು ಹಾನಿಕರ. ಸಾಮಾನ್ಯವಾಗಿ ಸರ್ವರ ಒಲವೂ ದಪ್ಪ ನೂಲುವುದರ ಕಡೆಗೇ ಇರುವುದು.

ಇದನ್ನು ತಡೆಯುತಕ್ಕದ್ದು. ಸಾಧ್ಯವಿದ್ದಷ್ಟು ಜಿನುಗು ನೂಲಿನ ಕಡೆಗೆ ಖಾದೀ ಉತ್ಪಾದಕರು ಗಮನಕೊಡತಕ್ಕದ್ದು.

೧೦ ನೂಲಿನ ಹುರಿಕಟ್ಟಿನ ಕಡೆಗೂ ಸಮಾನತೆಯ ಕಡೆಗೂ ಉತ್ಪಾದಕರು ಗಮನಕೊಡತಕ್ಕದ್ದು.

೧೧ ಜಿನುಗು ನೂಲೆಂದರೆ ಸ್ವಲ್ಪ ಹತ್ತಿಯಲ್ಲಿ ಹೆಚ್ಚು ಬಟ್ಟೆ. ಹುರಿಕಟ್ಟಿನ ನೂಲೆಂದರೆ ತಾಳಿಕೆಯ ಬಟ್ಟೆ. ಸಮವಾದ ನೂಲೆಂದರೆ ನಯವಾದ ಸುಂದರವಾದ ಬಟ್ಟೆ. ನೂಲು ಹುರಿಕಟ್ಟಿನದೂ ಸಮನಾದದ್ದೂ ಇದ್ದರೆ ನೇಕಾರನು ಕಡಮೆ ಕೂಲಿಯಿಂದ ನೇಯುತ್ತಾನೆ. ಆದುದರಿಂದ ಇವೆಲ್ಲವೂ ಖಾದಿಯನ್ನು ಅಗ್ಗಗೊಳಿಸುವ ಮಹತ್ವದ ಅಂಗಗಳೆಂಬುದು ಸ್ಪಷ್ಟ.

೧೨ ಖಾದೀ ಸೇವಕನಿಗೆ ಖಾದೀ ಉತ್ಪತ್ತಿಯ ಸರ್ವ ಕ್ರಿಯೆಗಳ ಅನುಭವಜನ್ಯ ಜ್ಞಾನವಿರತಕ್ಕದ್ದು. ಖಾದಿಯ ಹುಟ್ಟುವಳಿಗಾಗಿ ಉಪಯೋಗಿಸಲ್ಪಡುವ ಎಲ್ಲ ಯಂತ್ರಗಳ ಗುಣ ದೋಷಗಳೂ, ಅವನ್ನು ಸರಿಪಡಿಸುವ ಜ್ಞಾನವೂ ಇರತಕ್ಕದ್ದು. ಹಳ್ಳಿಯ ಒಕ್ಕಲಿಗರಿಗಷ್ಟೆ ಅಲ್ಲ, ಬಡಿಗ, ಕಮ್ಮಾರ ಮುಂತಾದ ಕೆಲಸಗಾರರಿಗೂ ಇದನ್ನು ಕಲಿಸುವಷ್ಟು ನೈಪುಣ್ಯ ಅವನಲ್ಲಿರ ತಕ್ಕದ್ದು. ಮಾತ್ರವಲ್ಲ, ಎಲ್ಲವನ್ನೂ ತೂಗಿಸಿಕೊಂಡು ಹೋಗುವ ಶಕ್ತಿಯೂ ಅವನಲ್ಲಿರಬೇಕು ಅರ್ಥಾತ್ ಅವನೊಬ್ಬ ಕುಶಲ ಶಿಲ್ಪಿಯಾಗಬೇಕು; ಖಾದಿಯ ಅರ್ಥಶಾಸ್ತ್ರವನ್ನು ಬಲ್ಲವನೂ ಇರಬೇಕು.

## ೬ ಸ್ವಾವಲಂಬಿಯಾದ ಮತ್ತು ಕೂಲಿಯ ಖಾದಿ

೧ ಒಕ್ಕಲಿಗನು ತನ್ನ ಹೊಲದ ಹತ್ತಿಯನ್ನೇ ಕಾಳು ತೆಗೆದು ಹಿಂಜಿ ನೂಲಬೇಕು; ಕೂಲಿ ಕೊಟ್ಟು ನೇಕಾರನಿಂದ ನೇಯಿಸಿಕೊಳ್ಳಬೇಕು. ಹೀಗೆ ಮಾಡಿದರೆ ಅವನಿಗೆ ಗಿರಣಿಯ ಬಟ್ಟೆಗಿಂತಲೂ ಖಾದಿ ಅಗ್ಗವಾಗುವುದು. ಹೀಗೆ ಮಾಡಿಕೊಂಡ ಖಾದಿಯೇ ಸ್ವಾವಲಂಬಿ ಖಾದಿ.

೨ ಒಕ್ಕಲಿಗನು ಪಾಹನದ ವೆಚ್ಚ ಸೇರಿದ ಹತ್ತಿಯನ್ನು ಕೊಂಡು ಹಿಂಜಿ, ನೂತು ನೇಯಿಸಿಕೊಂಡ ಬಟ್ಟೆಯೂ ಗಿರಣಿಯ ಬಟ್ಟೆಗಿಂತ ಅಗ್ಗವಾಗುವುದು; ಎಂದರೆ ಗಿರಣಿಯ ಬಟ್ಟೆಗಿಂತಲೂ ತೀರ ಕಡಮೆ ತುಟ್ಟಿಯಾಗುವುದು. ಈ ತುಟ್ಟಿತನ ಕೂಡ ನೂಲು ಹುರಿಕಟ್ಟಿನದಿದ್ದರೆ, ನೂಲಿನ ತರಗತಿಯಲ್ಲಿ ಸುಧಾರಣೆಯಾದರೆ ಇಲ್ಲದಂತಾಗುವುದು.

೩ ಕೂಲಿಯಿಂದ ಮಾಡಿಸಿದ ಖಾದಿಯು ಪ್ರಕಾರಗಳಲ್ಲೂ ಅಗ್ಗಳತೆಯ ವಿಷಯದಲ್ಲೂ ಇಂದಿನ ವರೆಗಾದ ಪ್ರಗತಿಯು, ಅದರ ಭಾವೀ ಉನ್ನತಿಯನ್ನೂ ಚರಖಾ-ಪ್ರವೃತ್ತಿಯು ಸರಿಯಾದ ಮಾರ್ಗ ಹಿಡಿದಿರುವುದನ್ನೂ ಸೂಚಿಸುತ್ತಿರುವುದೆಂದು ನಿರಾತಂಕವಾಗಿ ಹೇಳಬಹುದು.

೪ ಕೂಲಿಯು ಖಾದಿಯನ್ನು ಅಗ್ಗ ಮಾಡುವುದಕ್ಕಾಗಿ ಪಟ್ಟ ಪರಿಶ್ರಮವು ಯೋಗ್ಯ ಮಾರ್ಗಗಳಿಂದ ನಡೆಯಲಿಲ್ಲವೆಂದು ಸ್ಪಷ್ಟವಾಗಿ ಕಂಡುಬಂದಿದೆ. ಯಾವ ಬಡವರ ಕಲ್ಯಾಣಕ್ಕಾಗಿ ಈ ಕಾರ್ಯವು ಮೊದಲಾಯಿತೊ ಅದರಿಂದ ಅವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ದೊರೆಯುತ್ತದೊ ಇಲ್ಲವೊ ಎನ್ನುವುದರ ಕಡೆಗೆ ಸಂಪೂರ್ಣ ಗಮನವು ಕೊಡಲ್ಪಡಲಿಲ್ಲ.

೫ ಖಾದಿ ಇಲ್ಲವೆ ಉಳಿದ ಉದ್ಯೋಗಗಳ ಉದ್ಧಾರಕ್ಕಾಗಿ ದುಡಿಯುವ ಸೇವಕರ ಮತ್ತು ಸಂಘಗಳ ಧರ್ಮವು ಕೇವಲ ಉದ್ಯೋಗಗಳನ್ನು ಅಂತೂ ಇಂತೂ ನಡೆಸಿಕೊಂಡು ಹೋಗುವುದಷ್ಟೆ ಅಲ್ಲ. ಆ ಉದ್ಯೋಗಗಳಲ್ಲಿ ತೊಡಗಿದವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ಸಿಕ್ಕುವುದೊ ಇಲ್ಲವೊ ಎಂಬುದನ್ನು ಕೂಲಂಕಷವಾಗಿ ನೋಡುವುದೂ ಅವರ ಧರ್ಮ. ಒಂದು ವೇಳೆ ದುಡಿಯುವವರಿಗೆ ಅಷ್ಟಾದರೂ ಪ್ರತಿಫಲವು ದೊರೆಯದಿದ್ದರೆ ಆ ಉದ್ಯೋಗಗಳನ್ನು ನಡೆಸುವುದೆಂದರೆ ಬಡವರ ಪರಿಶ್ರಮದ ಅಯೋಗ್ಯ ಲಾಭ ತೆಗೆದುಕೊಂಡಂತೆ ಆಗುವುದೆಂದು ಹೇಳಬೇಕಾಗುವುದು.

೬ ಪರಿಶ್ರಮ ಪಡುವವರಿಗೆ ಹೊಟ್ಟೆಗೆ ಸಾಕಾಗುವಷ್ಟು ಪ್ರತಿಫಲವು ಮುಟ್ಟಿದ್ದನ್ನು ಮಾತ್ರ ನೋಡಿ ಖಾದೀ ಕೆಲಸಗಾರರು ಸಂತೋಷಪಡ ಕೂಡದು. ಅವರು ಪ್ರತಿಯೊಬ್ಬ ಕೂಲಿಕಾರನ ಜೀವನದಲ್ಲಿ ಪ್ರವೇಶಿಸಿ ಅವನು ತನ್ನ ಉದ್ಯೋಗದಲ್ಲಿ ಕುಶಲ ಶಿಲ್ಪಿಯಾಗುವಂತೆ, ತನ್ನ ಗಳಿಕೆಯನ್ನು ಯೋಗ್ಯ ರೀತಿಯಿಂದ ವೆಚ್ಚಮಾಡುವಂತೆ ನೋಡಿಕೊಳ್ಳತಕ್ಕದ್ದು.

೭ ಖಾದಿಯ ವಿಷಯವಾಗಿ ಸೂಚಿಸಲ್ಪಟ್ಟ ಈ ಕೆಳಗಿನ ನಿಯಮಗಳು ಎಲ್ಲ ಗ್ರಾಮೋದ್ಯೋಗಗಳಿಗೂ ಅನ್ವಯಿಸಬಲ್ಲುವು:

(೧) ಪ್ರತಿಯೊಬ್ಬ ಕಾರ್ಯಕರ್ತನೂ ಹತ್ತಿ ಬಿಡಿಸುವುದನ್ನು ಮೊದಲುಗೊಂಡು ನೇಯಿಗೆ ವರೆಗಿನ ಎಲ್ಲ ಕೆಲಸಗಳನ್ನೂ ಸರಿಯಾಗಿ ಅರಿತವನಿರಬೇಕು. ಎಂದರೆ ಮಾತ್ರ ಅವನು ಅನ್ಯರಿಗೆ ಕಲಿಸಬಲ್ಲನು.

(೨) ವ್ಯವಸ್ಥಾಪಕರು ತಮ್ಮ ತಮ್ಮ ಕ್ಷೇತ್ರದಲ್ಲಿ ಕೆಲಸ ಮಾಡುವ

